ಷ್ಟತರ್ಜನೀಮಧ್ಯ ದವರಿವಿಗೂ ಉದ್ದವಾಗಿ ನೆಟ್ಟತರುವ, ಸೀಮಾಂತರೇಖೆ ಯುಂಟು ಅದೇಪುರುಷನ ಆತ್ಮರೇಖೆ ಯೆಂಬುವದು ಅದಕ್ಕೆ ಮೇಲ್ಕಡೆಹ ಸ್ತಪಾರ್ಶ್ವದಿಂದ ಅಂಗೈತುಂಬ ನಡುಬಾಗದಲ್ಲಿ ಅಂಗುಷ್ಟ ತರ್ಜನೀಮಧ್ಯ ದವ ರಿನಿಗೂನೀಳವಾಗಿ ವಾಯುವ್ಯಾತಾಗ್ನೇಯಾಂ ತವಾದಸ್ತ್ರೀ ಸೀಮಾಂತರೇಕೆ ಯೊಂದುಂಟು ಅದೇಹೆಂಡತಿಯು ಆತ್ಮರೇಖೆ ಈ ಸ್ತ್ರೀ ಪುರುಷ ರೇಕೆಗಳ ಕೊ ನೆಗಳೆರಡೂ । ಹೆಬ್ಬೆಟ್ಟಿಗೂ ಉರುಟು ಬೆಟ್ಟಿಗೂ ನಡುವೆ ಶೇರಿಕೊಂ ಡುರುವೆ ವುಅಥವರಿಗೆ ದಂಪತ್ಯಾನು ಕೂಲವಿರುತ್ತೆ ಆರೇಕೆಗಳು ಸೆರಡುಬಂದು ಕ್ಕೊಂ ಡು ಬಿಟ್ಟುಕೊಂಡಿದ್ದರೆ ಗಂಡಹೆಂಡರು ಅಗಲಿಯಿರುತಾರೆ ಅವುಗಳಿಗೆ ಅಡ್ಡ ರೇಕೆಗಳು ಸೂಕ್ಷ್ಮ ಸಂಬಂಧದ ಬೆರಿಕೆಯೂ ಕೂಡೆ ಶುದ್ಧಾಂಗ ವಾಗಿಇ ಲ್ಲದೆ ಪಂಗಡವಾಗಿದ್ದರೆ ಅಂಥವರಿಗೆ ಮದುವೆಯೇ, ಯಿಲ್ಲವು ಇದ್ದರೂಪ್ರ ಯೋಜನ ವಿಲ್ಲವು ಗಂಡರೇಕೆಯುಕೊನೆ ಹಂಣು ರೇಕೆ ಕೊನೆಯಿಂದ ಮುಂ ದಕ್ಕೆ ಮೊಲಕೆ ತೋರಿದರೆ ಗಂಡು ಸಂತಾನ ಪ್ರಬಲಾಗೆ ಉಳಿಯುವದು ಹೆ ಣ್ಣುರೇಖೆ ಗಂಡು ರೇಖೆಯು ಕೊನೆಯಿಂದಾಮುಂದಳೆದು ಮೊಳಕತೋರಿದರೆ ದೌಹಿತ್ರ ಸಂತಾನವು ಸ್ಥಿರವಾಗಿರುತ್ತೆ ಉಭಯ ರೇಖೆಗಳಿಗೂ ಮೊಳಕೆಗ ಳೀಯಿಲ್ಲದೆ ಮೊಟಕಾಗಿಹೋದರೆ ಸುಖ ಸಂತಾನವಿಲ್ಲ ಅಂಕುರ ರೇಕೆಗೆಕತ್ತ ರಿರೇಕೆ ಬಿದ್ದರೆ ಸಂತಾನವಿದ್ದು ಭಗ್ನವಾಗುತ್ತೆ ಅಕರ ರೇಕೆ ಅಪ್ಪಳಿಯಾದರೆ ದತ್ತಸಂತಾನ ಉಳಿಯುವದು ಅದುವಿಂಗಡವಾಗಿ ಸಂದು ಬಿಟ್ಟು ಕೊಂಡರೆ ಅಸ್ಥಿರಯೂ ಕರ್ಮವೂ ಪರಸಂತಾನವನ್ನು ತೋರಿಸುತ್ತೆ ಗಂಡು ಹೆಂಣು ರೇಖೆ ಗಳಲ್ಲಿ ಕತ್ತರಿರೇಕೆ ತಗಿಲಿದ್ದರೆ ಪುರುಷ ಸ್ತ್ರೀಭೋಗಗಳು ಅಂತರಿಸಿ ಹೋ ಗುವವು ಗಂಡುರೇಕೆಗೆ ಅಪ್ಪಳಿಯಾದರೆ ಹೆಂಡತಿಗೆ ಮಿಂಡುಂದರಿರುವರು ಗಂಡು ರೇಕೆ ವಿಚ್ಛಿನ್ನವಾದರೆ ಹೆಂಡತಿ ಮುಂಡೆಯಾಗುವಳು ಅಥವಾ ಮುಂಡೆಯಾ ದಮೇಲೆ ಅವಳಿಗೆ ಗಂಡನಿರುವನು ಹೆಂಣು ರೇಕೆಯಲ್ಲಿ ಅಪ್ಪಳಿಸೇಲಿದರೆ ಗಂ ಡನು ಬೇರೆ ಸ್ತ್ರೀಯರನ್ನೂ ಪಡೆಯುವನು ಅಪ್ಪಳಿ ರೇಕೆಯು ಕಡೆತನಕ ಕಾಣುತ್ತಿದ್ದರೆ ಸವತಿಯು ರಿರುವರು ವಿಚ್ಛಿನ್ನವಾದರೆ ಅವಳಿಗಾಯುಷತೀರಿ ಗಂ ಡನಿಗೆ ಜೀವಮಹಮೆಯಾಗುವದು ಈ ಮೇರಸ್ತ್ರೀ ಪುರುಷರೇಕೆಗಳಿಂದ ದಂ ಪತಿಗಳ ನಿಪಾಹ ಫಲವೆಲ್ಲವನ್ನೂ ಊಹಿಸಬೇಕು॥ ೨೨॥

ಶ್ಲೋ॥ ಸ್ತ್ರೀರೇಕೋತ್ತರಹಸ್ತಸ್ಯ ಮಧ್ಯೇತಿರ್ಯಕ್ಪ್ರಸಾರಿಣೀ । ಪ್ರಾ ದ್ಮಾಗಹಸ್ತಾಂತ ಮಾರಭ್ಯತರ್ಜನೀ ಮಧ್ಯಮಾಂತರಂ ॥ ೨೩ ॥ ಯಾತಿಕಾ ಕಾಸ್ವಿತಾವಲ್ಲೀಯಧ್ವ ಧಾಯುಷ್ಯರೇಖಿಕಾ । ಪೂರ್ಣಾಶತಾಯುಃ ಷಂಡಶ್ಯಾ ದಂತರೇಮಧ್ಯಮಾಯುಷಂ ॥ ೨೪ ॥ ಕುರುತೇಪುರುಷಂ ಕಂಚಿತ್ಸ್ವಚ್ಛಿನ್ನಾಕಾ ಲಜೊಮೃತಿಃ । ಸಕಂಟಕತ್ವೇತು ವಿಷದೋಸಿಂಧ ತ್ವೇತುಜೀವನಂ॥

ತಾ॥ ಸ್ತ್ರೀರೇಖೆಗೂ ಬೆರಳುಗಳಿಗೂ ನಡುವೆಯಿರುವ ಹಸ್ತದಪೃತೀಯಭಾಗದ ಮಧ್ಯದಲ್ಲಿ ಹಿಡಿಯುಬಂಡದ ಕೊನೆಯಿಂದ ಅಡ್ಡವಾಗಿಯೂ ಊರ್ಧ್ವವಾಗಿಯೂ ಹೊರಟು ಉರಟು ಬೆರಳಿಗೂ, ನಡುಬೆರಲಿಗೂ ನಡುವ ಣಸಂದುತನಕ ಅಚ್ಛಿದ್ರವಾಗಿ ವ್ಯಾಪಿಸಿಕೊಡಿಗ ಳುಳ್ಳಕವಲು ಬಳಿಯೆಹಾಗೆ ಆಯುಷ್ಯರೇಕೆ ಇರುವದು ಅದುನೂರುವರ್ಷ ಆಯುಷ್ಯವನ್ನು ಪೂರ್ಣವಾಗಿಸೂಚಿಸುತ್ತೆ ಆರೇಖೆಯು ಅರ್ಧವಾಗಿದ್ದರೆ ೫೦ ವರ್ಷ ಮಧ್ಯಮಾಂಗುಳಿಯ ಸಮಭಾಗಕ್ಕೆ ಬಂದಿದ್ದರೆ ೬೦ ವರ್ಷ ಕಿರುಬೆರಳು ಸಮಭಾಗಕ್ಕೆ ಛಿದ್ರವಾಗಿದ್ದರೆ ೧೭ ವರ್ಷಕ್ಕೆ ಕಡಮೆ ಅಂತರಾಳದಲ್ಲಿ ಬಿಟ್ಟುಹೋದರೆ ಅರ್ಧಾಯುಷ್ಯ ಒ ಇವಾ ಅಲ್ಪಾಯು ರೋಗ ಆರೀಕೆಯಲ್ಲಿ ಶಿಥಿಲತ್ವ ಕಂಡರ ಅಪಮೃತ್ಯು ಗಂಡಗಳು ಅನೇಕ ಛಿದ್ರರೇಖೆಗಳು ಯಾವ ಆಕಾರವೋ ಮೃತ್ಯುವು ಅದರಮೂರಿಕವಾಗಿ ಸಂಭವಿಸುತ್ತೆ ಸಮಷ್ಟಿಯಾಗಿ ಆರೇಖೆಯು ಕುಡಿಬಿಟ್ಟು ಕೊಂಡು ಕವಲ ಹೆಣಿಕೆಯಾಗಿ ಅಚ್ಛಿದ್ರವಾದರೆ ಅವ ಮೃತ್ಯು ಗಳೆಲ್ಲವೂ ಪರಿಹರವಾಗುವವು॥ ೨೫

ಶ್ಲೋ॥ ಕರಮೂಲಂ ಸಮಾರಭಸ್ತ್ರೀಯು ।ವ್ಯಾಪ್ತೋರ್ಧ್ವ ಮುಚ್ರಿತಾ । ಮಧ್ಯಮಾ ನಾಮಿಕಾ ಸಂಧಿಂ ಪ್ರಾಪ್ಯೈ ಕಾರಂಚ್ ರೇಖಿಕಾ ॥ ಅರ್ಧಜೀವನಾದಜ್ಞೇಯಾ ತತ್ಪೂರ್ಣತ್ವೇ ಮಹಾಧನೀ । ಅದಿಮಧ್ಯಾಂತ ಭಾಗೇಷು ಯತ್ರಾರ ಭ್ಯಾತದಾದಿಗಾ ॥ ೨೭ ॥ ಯತ್ರೈವ ಪರ್ಯವಸೇ ತತಾವದ್ಧನಮುದೀರಯೇತ್ । ತಿರ್ಯಚ್ಛೇತ್ಕ ರ್ತರೇರೇಖಾ ಧನಬಂಗಂ ವಿನಿರ್ದಶೇತ್ ೨೮ ॥ ಕರ್ತರೀತ್ರಿತಯಂ ಪ್ರೋಕ್ತಂ ಮಹಾದಾರಿದ್ರ್ಯ ಸಂಜ್ಞಿತಂ । ಆಯುರ್ಯೋ ಜೀವನಾಂತು ಸ್ತ್ರೀಯೋಗೇತು ಸುಖಾವಧಿಃ ॥ ೨೯ ॥ ಸಂಯುಕ್ತಾರೇಖಾನುರೂಪಂ ಧನಪ್ರಾಪ್ತಿ ನಿಮಿತ್ತಕಂ । ಸರ್ವದಾತಾ ದೃಶೀಸೇಖಾಮಾಸ್ತ್ರಿಯಸ್ಯಕರಾಂತತಾ ॥ ೩೦ ॥ ಪರಾಟಿ ಕಾಪಿತಸ್ಯೇ ಕ್ಷಣಮಾತ್ರಂ ನತಿಷ್ಠತಿ ಪರ್ಯಂತಿರ ಸದ್ಯೋಗ ಲಕ್ಷಣೈರ್ಧ ನಮಾಪ್ನುಯಾತ್ ॥ ೩೧ ॥ ಆಬಾವೇಧನ ರೇಖಾಯಾ ಧನೀತಿನಹಿಕೀರ್ತ್ಯತೇ । ವ್ಯಯೋಪಿಸುಮಹಾನ್ಭೂಯಾದೋಪಜೀವಪನಿರ್ಣಯಃ ॥ ೩೨।

ತಾ॥ ಅಂಗೈಯಲ್ಲಿ ಮಧ್ಯಭಾಗದೊಳಗೆ ಮಣಿಕಟ್ಟಿನ ಕಂಕಣರೇಕೆಯಿಂದ ಮೊದಲುಗೊಂಡು ನಡುಬೆರಳಿಗೂ ಉಂಗ್ರದಬೆರಳಿಗೂ ಸಂಧಿನತೆನಕ ಮೆಟ್ಟಗೆ ಊರ್ಧ್ವವಾದರೇಖಿ ಸ್ತ್ರೀ ಸೀಮಂತ ರೇಕೆಯನ್ನೂ ಆಯುಷ್ಯರೇಕೆಯನ್ನೂ ಹೊಳ್ಕು ಸ್ಪಷ್ಟವಾಗಿ ಮೇಲಕ್ಕೆ ವ್ಯಾಪಿಸಿ ಇರುತ್ತೆ ಅದೇ ಧನಜೀವನ ರೇಕೆಯೆಂಬುವದು, ಅದು ಸಂಪೂರ್ಣವಾಗಿದ್ದರೆ ಆಗರ್ಭ ಶ್ರೀಮಂತನಾಗಿ ಯಾವಜ್ಜೀವವೂ ಮಹಾಧನಿಕ ನೆನ್ನಿಸಿ ಕೊಳ್ಳುತ್ತಾನೆ ಅದ

ಕ್ಕೆ ಕರ್ತರೀರೇಕೆಗಳು ತಗಿಲಿದರೆ ಧನಭಂಗನಾಗುತ್ತೆ ಪ್ರಬಲವಾಗಿ ಮೂರು ಕರ್ತರೀ ರೇಕೆಗಳು ಅಡ್ಡತಗಿಲಿದರೆ ಅವನೇ ಕಡುಬಡುವ ನಾಗುತ್ತಾನೆ, ಆ ರೇಕೆಯು ಮೇರುಪಾಲು ಮಾಡಲ್ಪಟ್ಟಂತೆ ಭಾವಿಸಿ ಆದಿಮಧ್ಯಾಂತ ಭಾಗ ಗಳಲ್ಲಿ ಎಲಿಂದ ರೇಖಾರಂಭ ವಾಗುವದೋ ಆಯುಷ್ಯದಲ್ಲಿ ಅಷ್ಟನೇ ಭಾಗ ದವಯಸ್ಸಿನಿಂದಾ ಧನವನ್ನು ಸಂಪಾದಿಸಿ ಜೀವನಮಾಡುವ ಯೋಗವುವುಂ ಟಾಗುತ್ತೆ, ಯಾವಭಾಗದಲ್ಲಿ ಮುಗಿದು ಹೋದರೆ ಆ ಭಾಗದ ವಯಸ್ಸಿಗೆ ಧ ನ ಸಂಪಾದನ ಯೋಗರೀತಿ ಹೋಗುತ್ತೆ, ಆರೇಕೆಯೇ ಖಂಡ ಖಂಡ ಗ ಳಾಗಿದ್ದರೇ ಆಗಾಗ್ಯೆ ಸಂಭವಿಸುವ ಖಂಡಾರ್ಜನ ಧನಯೋಗಗಳು ಕೊಂಚ ಕೊಂಚ ವಿರುತ್ತೆ ಅಂಥಾ ಧನರೇಕೆ ಯೊಂದಿಗೆ ಪಕ್ಕಗಳಲ್ಲಿ ಎಂಥಾ ರೇಕೆ ಗಳ ಸಂಪರ್ಕ ವಿರುಪದೋ ಗೆಂಥಾದರ ಮೂಲಕವಾಗಿ ಧನಸಂ ಪಾದರೆ ಅಗುತ್ತೆ, ಅಂದರಿ ಹಲರೇಕೆ ಸೋಕೆದರೆ ಕೃಷಿಮೂಲಕ ತಟಾಕ ರೇಕೆ ಸೋಕಿದರೆ ಕೆರೆಮೂಲಕ ಪಶುರೇಕೆ ಸೋಕಿದರೆ ಪಶುಮೂಲಕವು ದ್ವಾ ರೇಕೆ ಸೋಕಿದರೆ ಅಧಿಕಾರಮೂಲಕ ಧ್ವಜರೇಕೆ ಸೋಕಿದರೆ ಶೌರ್ಯಮೂ ಲಕ ವಿದ್ಯಾರೇಕೆ ಸೋಕಿದರೆ ವಿದ್ಯಾಮೂಲಕ ಈ ಮೇರೆ ಸಂಬುಧರೇಕೆ ಗಳನ್ನು ನೋಡಿಕೊಂಡು ಧನಾರ್ಜನಕ್ಕೆ ಕಾರಣವಾದ ಜೀವನೋಪಾಯ ವನ್ನು ನಿರ್ಧರಿಸಬೇಕು, ಧನರೇಕೆಯೇ ಸರ್ವಾತ್ಮ ನಾಯಿಲ್ಲದೆ ಲೆಹೋದರೆ ಅಂಲ್ಲಿವನಿಗೆ ಧನಲಾಭವೂ ಜೀವನೋ ಪಾಯವು ಇರುವದೇಯಿಲ್ಲ ಸೂಕ್ಷ್ಮ ವಾಗಿದ್ದರೆ ಕಿಂಚಿನ್ಮಾತ್ರ ವಿರುತ್ತೆ ಪಿತೃರೇಕೆಯನ್ನು ಸೋಕಿಯಿದ್ದರೆ ಪಿ ತ್ರಾರ್ಜಿತ ಧನಲಾಭ ಹೀಗೆ ಬಂಧ್ವಾದಿ ರೇಖಾ ಸಂಬಂಧಗ ಳಿಂದ ಬಂಧ್ವಾದಿ ಮೂಲಕವಾದ ಧನಲಾಭವಾಗುತ್ತೆ, ಧನರೇಕೆ ಯುಬುಡವೂ ಪುರುಷರೆಕೆ ಯುಬುಡವೂ ಬೆರತು ಕೊಂಡಿದ್ದರೆ ಸ್ವಾರ್ಜಿತ ಧನದಿಂದ ಜೀವನ, ಆರಂ ಭದಲ್ಲಿ ಎರಡುರೇಕೆ ಗಳೂ ಬೇರೆ ಬೇರೆ ಯಿದ್ದು ಅವುಗಳಿಗೆ ಮತ್ತೆರಡು ಸಂಬಂಧ ರೇಕೆಗಳು ದೀರ್ಘಚತುರ ಶ್ರಾದಿ ಕೋಣರೂಪ ದಿಂದ ಬೆರಿದಿದ್ದರೆ ಕಷ್ಟಾರ್ಜಿತ ದ್ರವ್ಯಲಾಭ ಅದರಲ್ಲಿ ಕಲಶರೇಕೆಯೂ ಅಂಕುಶರೇಕೆಯೂ ಸರ್ಪರೇಕೆಯೂ ಬೆರಡಿದ್ದರೆ ನಿಧಿನಿಕ್ಷೆ ಫಲಾಭ, ಧನರೇಕೆಗೆ ಕಿರೀಟರೇಕೆ ಬೆರದಿದ್ದರೆ ಕಾಣಿಕೆ ತೆಗದು ಕೊಳ್ಳುತ್ತಾನೆ, ಗದ್ದುಗೇರೇಕೆ ಬೆರದಿದ್ದರೆ ರಾಜ ದ್ರವ್ಯಲಾಭ, ತುಲಾರೇಕೆ ಬೆರದಿದ್ದರೆ ವಾನಿಜ್ಯಮೂಲಕೆ ಧನಲಾಭ ಆಯು ಧರೇಕೆ ಬೆರದಿದ್ದರೆ ಶಿಲ್ಪಮೂಲಕ ಧನಲಾಭ ಛತ್ರರೇಕೆ ಸೋಂಕಿದರೆ ಪ್ರಭು ತ್ವಮೂಲಕ ಧನಲಾಭ, ಶಕಟರೇಕೆ ಸೋಂಕಿದರ ವಾಹನಲಾಭ, ನೌ ಕಾರೇಕೆ ಸೇರಿದರೆ ಜಲಯಾನದಿಂದ ಧನಲಾಭ, ಹೀಗೆ ನೋಡಿಕೊಳ್ಳತಕ್ಕ ದ್ದು ತ್ರಿಶೂಲಡಮರುಗ ಕಪಾಲರೇಕೆಗಳು ಬೆರತರೇ ಭಿಕ್ಷುಕನಾಗುತ್ತಾನೆ

ಧನರೇಕೆಯು ಸ್ತ್ರೀರೇಕೆಯವರಿವಿಗೂಯಿದ್ದು ಮುಗಿದುಹೋದರೆ ಹೆಂಡತಿ ಬದುಕಿರುವತನಕ ಧನಸಂಪಾದಿಸುತ್ತಾನೆ,ಅದೇರೇಖೆಆಯುಷ್ಯರೇಖೆಯನ್ನು ಸೋಂಕಿ ನಿಂತುಹೋದರೆ ತಾನು ಬದುಕಿರುವತನಕ ಹಣಸಂಪಾದಿಕೊಳ್ಳುತ್ತಿರುವನು. ಆಯುಷ್ಯರೇಕಯ ಮೇಲಕ್ಕೂ ವ್ಯಾಪಿಸಿಯಿದ್ದರೆ ಸಂಪಾದಿಸಿ ಮಕ್ಕಳಿಗೆ ಕಾಣಾಚಿಯಾಗುವಂತೆ ಲಿಬ್ಬಮಾಡಿ ಆಸ್ತಿಮಡಗುವನು ಈಧನರೇಕೆಯ ಫಲವು ಗ್ರಂಧಗಳಲ್ಲಿ ಇನ್ನೂ ವಿಶೇಷವಾಗಿಯೂ ಸೂಕ್ಷ್ಮವಾಗಿಯೂ ತಿಳದು ಸಂಗ್ರಹಿಸಲ್ಪಡತಕ್ಕದ್ದು.

ಶ್ಲೋ ॥ ಪುಂಸ್ತ್ರ್ಯಾಯುರ್ಧನರೇಖಾಸ್ತು ಚತಸ್ರಃಪ್ರಕಟಾಃಕರೇ ।
ಮಧ್ಯೇತ್ವವಾಂತರಂಲಕ್ಷ್ಮನರಾಣಾಂಫಲನಿರ್ಣಯೇ ॥ ೩೩॥

ತಾ॥ ಪುರುಷರೇಕೆ, ಸ್ತ್ರೀರೇಕೆ, ಆಯುಷ್ಯರೇಕೆ, ಧನರೇಕೆ, ಈನಾಲ್ಕುರೇಖೆಗಳೂ ಅಂಗೈಯಲ್ಲಿ ಸ್ಪಷ್ಟವಾಗಿಯೂ ಪೂರ್ಣವಾಗಿಯೂತಿಳಿಯಲ್ಪಡತಕ್ಕದ್ದು, ಅವುಗಳನಡುವೆ ಇರುವಸ್ಥಳಗಳಲ್ಲಿ ಅವಾಂತರರೇಕೆಗಳು, ತತ್ತತ್ಕಾಲಗಳಲ್ಲಿ ಹುಟ್ಟಿ ಫಲಾನುಭವ ತೀರಿದಮೇಲೆ ಅಡಗಿಹೋಗುತ್ತವೆ ಕೆಲವು ಹುಟ್ಟಿದ್ದು ಮೊದಲು ಸ್ವಾಭಾವಿಕವಾಗಿದ್ದು ಕೆಲವುಕಾಲವಾದಮೇಲೆ ಅಳಿಸಿಕೋಗುತ್ತವೆ, ಕೆಲವುಮಧ್ಯೆ ಆರಭಿಸಿ ಯಾವಜ್ಜೀವವೂ ಇರುತ್ತವೆ. ಅವೆಲ್ಲವೂ ಕೆಲವು ಅವ್ಯಕ್ತಗಳಾಗಿಯೂ ಕೆಲವುಸೂಕ್ಷ್ಮಗಳಾಗಿಯೂ ಕೆಲವು ಸ್ಪಷ್ಟಗಳಾಗಿಯೂ ಇದ್ದು ತಮ್ಮ ಸ್ವರೂಪಾನುಗುಣವಾಗಿ ಶುಭಾಶುಭ ಫಲಗಳನ್ನು ಸೂಚಿಸುವವು, ಅವುಗಳ ವಿವರಣವನ್ನೂ ಕಾಲನಿರ್ಣಯವನ್ನೂ ರೇಕೆಗಳಸ್ವರೂಪ ಪರಿಮಾಣಗಳಿಂದ ಅನುಭವಾನುಸಾರವಾಗಿ ಲೋಕದರ್ಶನದಿಂದ ತ್ರೈರಾಶಿಕದಮೇಲೆ ಊಹಿಸಿತಿಳಕೊಳ್ಳಬೇಕು. ಇತ್ಯಾದಿ ವಿಶೇಷಗಳು ಇತರಗ್ರಂಥ ವಚನೋದಾಹರಣವಾಗಿ ವಾಖ್ಯಾನಗಳಲ್ಲಿ ಹೇಳಲ್ಪಟ್ಟಿವೆ

ಶ್ಲೋ ॥ ಗಿರಿರ್ಗಜೋಂಕುಶಂಶಂಖಂ ಕುಂಡಲಂಚಂದ್ರ ಸೂರ್ಯಕೌ । ಯೋನಿರಾಂದೋಳಿಕಾಚೈವ ಕಂಕಣಂಜಾವಿಮುಸಕಂ ॥೩೪॥ ನೇತ್ರಂಚಸ್ವಸ್ತಿಕಂಶೂಲಂ ಕಿರೀಟಂಪಾನಭಾಜನಂ । ಕರ್ಕಟಂಪರಶುಶ್ಚೇತಿರೇಖಾ ಅಂಗುಷ್ಠಮೂಲಕಾ ॥೩೫॥ ಸ್ತ್ರೀಪುಂಧನಾಂತರೇರೇಖಾ ಅಷ್ಟಕೋಣಂತ್ರಿಶೂಲಕಂ । ವೇದಿಕಾಮಾನುಷಶಿರಃ ಕಮಲಂಧನುರೇವಚ ॥ ೩೬ ॥ ಸಸರ್ಪಶ್ಚಭೇದಿನೀಪುಸ್ತಂ ವೀಣಾಚೈವತ್ರಿಕೋಣಕಂ । ಕರ್ತುಲಂಚತಟಾಕಂಚ ಸ್ವಸ್ತಿಕಂಚವಿನಿರ್ದಿಶೇತ್ ॥ ೩೭ ॥ ಸ್ತ್ರೀಸೀಮಾಧನಮಧ್ಯೇತು ತುಲಾಚಗಜಮಸ್ತಕಂ । ಹಲಮಶ್ವಂಮಂದಿರಂಚ ಗ್ರಾಮಂಚವಾರುಕಾಂಕುಶೌ ॥೩೮॥ ಕಲಶಂಪುಸ್ತಕಂ ಖಡ್ಗ ಮಿತ್ಯಾದಿಕಮುದೀರಯೇತ್ । ಪ್ರಾಗ್ಧಕ್ಷಿಣಾಂತರೇಚಾಯು ರ್ದ್ವಾರೀವಿ

ತ್ರಾಂತರಾಳಕೇ ॥ ೩೯ ॥ ಪ್ರವೇಶಗೋಪುರಚ್ಛತ್ರ ದೇವಾಲಯಸಮಾಸ್ಮೃ
ತಾಃ । ಧನುರ್ಘಂಡಾದಿಕಾರೇಖಾವಿಜ್ಞಾತವ್ಯಾಮನೀಷಿಭಿಃ ॥ ೪೦ ॥ ಆಯು
ರ್ಮಾರ್ಧ್ಯಂತರೇವಿತ್ತ ಸ್ತ್ರ್ಯಾದೀಚ್ಛಾಂರಳಸಂಜ್ಞಿಕಾ । ನೌಕಾಚಕಮಲಂಬಾಣಾಂ
ಗದಾಃಸುಪಿಚಕೀರ್ತಯೇತ್ ॥೪೧॥ ಆಯೂರೇಕೋಪರಿಷ್ಟಾತ್ತ್ವ ಕಿರೀಟಂಧ್ವ
ಜಮೇವಚ । ವಿದ್ಯಾಂಸೆಂಹಾಸನಂವಲ್ಲೀ ಚಿತ್ರರೇಖಾಂವಿನಿರ್ದಿಶೇತ್ ॥ ೪೨ ॥
ಕುಲಿಶಾಡ್ಯಾಸ್ತಥಾರೇಖಾನಿರ್ದಿಷ್ಟಾಹಸ್ತಮಧ್ಯಗಾಃ । ರೇಖಾಅಪ್ಯನುರೇಖಾಶ್ಚ
ಉಪರೇಖಾಶ್ಚಸೂಕ್ಷ್ಮಗಾಃ ॥ ೪೩ ॥ ಪ್ರಾಣಿಕರ್ಮಾನುಸಾರೇಣ ದೇಹಜಾಃಫಲ
ಸೂಚಕಾಃ । ವಿಸ್ಪಷ್ಟಂಪರಿದೃಶ್ಯಂತೇ ಕರ್ಮಕೃದ್ಧಸ್ತಮಧ್ಯಗಾಃ ॥ ೪೪ ॥ ಸ್ವ
ರೂಪಾನುಗುಣಂತಾಸಾಂ ಫಲಂವಾಚ್ಯಂಮುನೀಷಿಣಾ । ವಿರುದ್ಧಫಲಯೋರೋ
ಗೇಪ್ರಬಲಸ್ಯೈವಸಂಭವಃ ॥ ೪೫ ॥ ತದೇಕಾಫಲಯೋರೋಗೇ ಪ್ರಾಬಲ್ಯಂಪ
ರಿಕೀರ್ತಯೇತ್ । ಗಜಾಶ್ವಾಂದೋಳಿಕಾಛತ್ರ ಚಾಮರಧ್ವಜವಾಹನಂ ॥ ಸಿ
ಹ್ಮಾಸನಾದಿಕಂಜ್ಞೇಯಂ ರೇಖಾತೋರಾಜಲಕ್ಷಣಂ । ಚಂದ್ರಾರ್ಕಗೋಪುರಾದೀ
ನಿ ದೇವಾಲಯಮುಖಂತಥಾ ॥ ೪೬ ॥ ದೈವಿಕಂಲಕ್ಷಣಂಜ್ಞೇಯಮಾಯುಧಂ
ಶೂರಲಕ್ಷಣಂ । ಜಲಜಂತ್ವಾದಿಕೇಭಾಗ್ಯಂ ವಾಣಿಜ್ಯೇಪಕೃತೌಧನಂ ॥೪೭॥
ಜಲೋಪಕರಣೇಸೌಖ್ಯ ಮವಿಮಸ್ತ್ರೀತಪಾವಿಷಂ । ಹಲಾದಿಕೇಕೃಷಿರ್ಜ್ಞೇ
ಯಾ ಗಿರಿಗ್ರಾಮಾದಿಕೇಪ್ರಭುಃ ॥ ೪೮ ॥ ಕಿರೀಟಂಪುಸ್ತಕಂವಲ್ಲೀ ಚಿತ್ರಧ್ವಜ
ಸಮುದ್ಭವಾಃ । ಪಾಂಡಿತ್ಯಲಕ್ಷಣಾರೇಖಾ ಮಸ್ತಕಂಚೌರ್ಯಲಕ್ಷಣಂ ॥ ೫೦ ॥
ಧನಕೃತ್ಕ್ರಲಕಂಸರ್ಪಃ ವೀಣಾಗಾಯನಲಕ್ಷಣಾ । ಜೀವಹಿಂಸಾಕರಃಪಾಶಃ ಪಾನ
ಕೃತ್ಪಾನಭಾಜಂ ॥ ೫೧ ॥ ವಿಷಮಂಚಚತುಷ್ಕೋಣಂ ಶಿಲ್ಪಂಸೇವಕಲಕ್ಷಣಂ।
ಅಷ್ಟಕೋಣತಟಾಕಾದಿ ಕೂಪಖಾತಾದಿಲಕ್ಷಣ ॥ ೫೨ ॥ ಯವಾದಿಕೇತು
ಮೃಷ್ಟಾನ್ನಂ ಚಕ್ರಾದ್ಯಂಪ್ರಭುಲಕ್ಷಣಂ । ಯೋನ್ಯಾಕೇತುದೌರ್ಭಾಗ್ಯಂ
ಯೂಪಾದ್ಯೇಯಜ್ಞಶೀಲತಾ ॥ ತ್ರಿಶಾಲದೌಭಿಕ್ಷುಕತ್ವಂ ಫಲಮುಚ್ಚಾಪಚೆಂವ
ದೇತ್ । ಸ್ತ್ರೀಣಾಂದಕ್ಷಿಣಹಸ್ತಸ್ಥಾ ಪುಂಸಾಂವಾಮಕರಸ್ಥಿತಾ ॥ ೫೪ ॥ ರೇ
ಖಾಪುಂಸ್ತ್ರೀಫಲೇಕುರ್ಯಾ ತ್ಫಲಸ್ಯಪರಿವರ್ತನಂ । ವಿತಪಾದ್ಯಾಸ್ತಥಾರೇಖಾ
ಊರ್ವ್ಯಾದ್ಯನ್ಯಾಂಗಸಂಸ್ಥಿತಾಃ ॥ ೫೫ ॥ ತಥಾಪಾದತಲೇಸರ್ವಂ ಫಲಂವಾಚ್ಯಂ
ಪೃಥಕ್ಪೃಥಕ್ । ರೇಖಾರಮ್ಯಾಕೃತೌಶಸ್ತಂ ನೈಕೃತೇವಿಕೃತಂಫಲಂ ॥ ೫೬ ॥
ಮಾಲಿನ್ಯೇತ್ವಪ್ರಕಾಶಸ್ಸ್ಯಾದೇತತ್ಸಾಮುದ್ರಿಕಂಸ್ಮೃತಂ । ತತ್ರದೇವಾಂಶಿಸಂ
ಭೂತಂ ದೈವಲಕ್ಷಣಲಕ್ಷಿತಂ ॥ ೫೭ ॥ ರಾಜಲಕ್ಷಣಯುಕ್ತಂಚ ಮಹಾಪು
ರುಷಮೀರಯೇತ್ । ನಾರೀಚತಾದೃಶೀಜ್ಞೇಯಾ ದೇಶಕಾಲಾನುಮಾನತಃಪೂ
ರ್ವಮಾಯುಃಪರೀಕ್ಷೇತ ಪಶ್ಚಾಲ್ಲಕ್ಷಣಮೀರಯೇತ್ । ಆಯುರ್ಹೀನೇನರಾ
ಣಾಂತು ಲಕ್ಷಣೈಃಕಿಂಪ್ರಯೋಜನಂ ॥ ೫೯ ॥ ನವಂಧ್ರಾಣಿಹಸ್ತಾಂಘ್ರಿಸ್ಪೃಷ್ಟ

ನಾಭಿಶಿರೇವಪುಃ । ಕಂಠವಕ್ಷೋದರೋರಾದಿ ಸಹರೇಖಂಪರೀಕ್ಷಯೇತ್ ॥ ೯೦॥ ಸ್ವರಂದೃಷ್ಟಿಚಶೀಲಂಚ ವಿಜ್ಞಾಯಫಲವಿಚಾರಯೇತ್ । ರೇಖೈವಹ್ಯೈಶ್ವ ರೀಮುದ್ರಾಶರೀರಿಂಹಿಸಮುದ್ರಕಂ ॥ ೭೦ ॥ ಏತತ್ಸಾಮುದ್ರಿಕಂಶಾಸ್ತ್ರಂಸಂಗ್ರ ಹೇಣಸವಿಚಾರಿತಂ ॥ ೭೧॥

ತಾ ॥ ಜಿಟ್ಟೆ, ಆಸ, ಅಂಕುಷ, ಶಂಖ, ಬಾವುಲಿ, ಚಂದ್ರ, ಸೂರ್ಯ, ಯೋನಿ, ಪಾಲಕ್ಕಿ, ಕಂಕಣ, ಕುರೀತಲೆ, ಕಂಣು, ಸ್ವಸ್ತಿಕ, ಶೂಲ, ಟೊಪ್ಪಿಗೆ, ಕುಡಿಯುವಬಟ್ಲು, ನಳ್ಳಿಕಾಯಿ, ಕಂಡಕೊಡ್ಲಿ, ಇತ್ಯಾದಿರೇಖೆಗಳು ಹೆಬ್ಬೆಟ್ಟಿನ ಬುಡದಲ್ಲಿ ಇರತಕ್ಕವುಗಳು, ಸ್ತ್ರೀರೇಕೆಗೂ, ಪುರುಷರೇಕೆಗೂ, ಧನರೇಕೆಗೂ ನಡುವೆ ಅಷ್ಟಕೋಣ, ತ್ರಿಶೂಲ, ಜಗುಲಿ, ಮನುಷ್ಯನತಲೆ, ಕಮಲ, ಬಿಲ್ಲು, ಹಾವು, ಭರ್ಜಿ, ಪುಸ್ತಕ, ವೀಣೆ, ತ್ರಿಕೋಣ, ಸೊನ್ನೆ, ತಟಾಕ (ಅಂದರೆಕೆರೆ) ಸ್ವಸ್ತಿಕ, ಇತ್ಯಾದಿರೇಕೆಗಳು, ಇರತಕ್ಕದ್ದು. ಸ್ತ್ರೀರೇಕೆಗೂ, ಧನರೇಕೆಗೂ, ನಡುವೆ ತ್ರಾಸು, ಆನೆತಲೆ, ನೇಗಿಲು, ಕುದುರೆ, ಮನೆಗ್ರಾಮ, ಡಮರುಗ, ದೋಣಿ, ಕಲಶ, ಮಹಿ, ಕತ್ತಿ ಇತ್ಯಾದಿರೇಕೆಗಳು ಇರತಕ್ಕವುಗಳು, ಆಯುಷ್ಯದರೇಕೆಗೂ ಸ್ತ್ರೀರೇಕೆಗೂ ಧನರೇಕೆಗೂ ನಡುವೆ ಹಸ್ತದ ಅಂಗುಷ್ಠದಕಡೆಗೆ ಗೋಪುರ ಕೊಡೆ ದೇವರಗುಡಿ ಬಿಲ್ಲು ಘಂಟೆ ಮುಂತಾದರೇಕೆಗಳು ಇರತಕ್ಕವುಗಳು ಅದಕ್ಕೆ ಎಡಗಡೆ ತೇರು ಹಡಗು ತಾವರೆ ಬಾಣ ಗದೆ ಇತಾದಿರೇಕೆಗಳು ಇರತಕ್ಕದ್ದು. ಆಯುಷ್ಯದರೇಕೆಯು ಮೇಲ್ಗಡೆಗೆ ಕಿರೀಟ ಧ್ವಜ ವಿದ್ಯೆ ಸಿಂಹಾಸನ ಬಳ್ಳಿ ಚಿತ್ರ ಇತ್ಯಾದಿರೇಕೆಗಳು ಇರತಕ್ಕದ್ದು. ವಜ್ರಾದಿರೇಕೆಗಳು ನಡುವೆ ಇರುತ್ತವೆ. ರೇಕೆಗಳೂ ಅನುರೇಕೆಗಳೂ ಉಪರೇಕೆಗಳೂ ಸೂಕ್ಷ್ಮರೇಕೆಗಳೂ ಪ್ರಾಣಿಗಳ ಕರ್ಮಾನುಸಾರವಾಗಿ ದೇಹದಲ್ಲಿ ಹುಟ್ಟಿ ಫಲಗಳನ್ನು ಸೂಚಿಸುತ್ತವೆ. ಅವು ಕರ್ಮಫಲವನ್ನು ಕರ್ಮಮಾಡಿದ ಅಂಗೈಯಲ್ಲಿ ಕಾಣಿಸಿಕೊಂಡು ಸೂಚಿಸುವವು. ಆ ರೇಕೆಗಳಿಗೆ ಇರುವ ಪ್ರಕಾರಕ್ಕೆ ತಕ್ಕಫಲವನ್ನು ಬುದ್ಧಿವಂತರು ಊಹಿಸಿ ಹೇಳತಕ್ಕದ್ದು. ಎರಡುಫಲಗಳು ಅನೇಕರೇಕೆಗಳಿಂದ ವಿರುದ್ಧಗಳಾಗಿ ತಿಳಿದುಬಂದರೆ ಅವುಗಳಲ್ಲಿ ಪ್ರಬಲರೇಕೆಗಳು ಫಲಮಾತ್ರವೇ ನಡೆಯುತ್ತೆ ಒಂದೇಫಲವನ್ನು ಅನೇಕರೇಕೆಗಳು ಸೂಚಿಸಿದರೆ ಅದೇ ಪ್ರಬಂವು. ಆನೆ ಕುದುರೆ ಅಂದಳ ಛತ್ರ ಚಾಮರ ವಾಹನ ಧ್ವಜ ಸಿಹ್ಮಾಸನ ಕಿರೀಟ ಮುದ್ರೆ ಕತ್ತಿ ಮುಂತಾದ ರೇಕೆಗಳು ರಾಜಲಕ್ಷ್ಮಣವಾಗಿರುತ್ತೆ ಇದಕ್ಕೆ ಪ್ರಭುತ್ವವೇಫಲವು. ಚಂದ್ರ ಸೂರ್ಯ ಗೋಪುರ ದೇವರಗುಡಿ ಮೊದಲಾದದ್ದು ದೇವಲಕ್ಷಣವು. ಆಯುಧಗಳು ಶೂರಲಕ್ಷಣವು. ಮೀನು ಮೊಸಳೆ ಏಡೀಕಾಯಿ ಮುಂತಾದ್ದು ಭಾಗ್ಯಲಕ್ಷಣವು. ತ್ರಾಸು ಬಳ್ಳ

ಮೊದಲಾದ್ದು ವಾಣಿಜ್ಯಮೂಲಕ ಧನಲಕ್ಷಣವು. ಕುರೀತಲೆ ಮಾಂಸಲಕ್ಷಣವು. ನೇಗಿಲು ಮುಂತಾದ್ದು ಕೃಷಿಲಕ್ಷಣವು. ಬೆಟ್ಟಗ್ರಾಮ ಮೊದಲಾದದ್ದು ಮತ್ತು ಕೆರೆ ಭಾವಿ ಕೋಟೆ ಮೊದಲಾದ್ದು ಬಡತನದ ಲಕ್ಷಣವು, ವಿದ್ಯಾರೇಕೆ ಕಿರೀಟ ಪುಸ್ತಕ ಬಳ್ಳಿ ಧ್ವಜ ಚಿತ್ರ ಇತ್ಯಾದಿರೇಕೆಗಳು ಪಾಂಡಿತ್ಯಲಕ್ಷಣವು. ಮನುಷ್ಯನತಲೆ ಚೋರಲಕ್ಷಣವು. ವೀಣೆ ಸಂಗೀತಲಕ್ಷಣವು. ಕಲಶವೂ ಸರ್ಪವೂ ಧನ ಪಿಶಾಚಲಕ್ಷಣವು, ಪಾಶರೇಕೆ ಜೀವಹಿಂಸಾಲಕ್ಷಣವು, ಪಾನಪಾತ್ರೆ ಹೆಂಡಕುಡನಕ ಲಕ್ಷಣವು, ವಿಷಮಕೋಣ ಚತುಷ್ಕೋಣ ಮುಂತಾದ್ದು ಶಿಲ್ಪಸೇವಕ ಲಕ್ಷಣವು. ಯೆವಗೋಧೂಮಾದಿ ರೇಕೆಗಳು ವೃಷ್ಟ್ಯನ್ನ ಲಕ್ಷಣವು. ಚಕ್ರಾದಿರೇಕೆಗಳು ಭೋಗಗೌರವ ಪ್ರಭಾವ ಲಕ್ಷಣವು, ಯೋನ್ಯಾದಿರೇಕೆಗಳು ದೌರ್ಭಾಗ್ಯಲಕ್ಷಣವು. ಯೂಪಾದಿರೇಕೆಗಳು ಯಜ್ಞಾದಿಪುಣ್ಯಕರ್ಮ ಲಕ್ಷಣವು ತ್ರಿಶೂಲಾದಿರೇಕೆಗಳು ಭಿಕ್ಷಾಲಕ್ಷಣವು. ಹೀಗೆ ಅನೇಕಭೇದವಾಗಿ ಹೇಳಬೇಕು, ಹೆಂಗಸರಿಗೆ ಬಲಗೈಲಿ ರೇಕೆಗಳನ್ನು ಚನ್ನಾಗಿದ್ದರೆ ಫಲವು ಗಂಡಾನಿಗಾಗುತ್ತೆ, ಗಂಡಸಿಗೆ ಎಡಗೈಲಿ ರೇಕೆಗಳು ಚನ್ನಾಗಿದ್ದರೆ ಫಲವು ಹೆಂಡತಿಗಾಗುತ್ತೆ ಇದೇಮೊದಲಾದ ರೇಕೆಗಳು ಕೂಡೆಮುಂತಾಗಿ ಇತರಾಂಗಗಳಲ್ಲಿಯೂ ಹಾಗೆಯೇ ಅಂಗಾಲುಗಳಲ್ಲಿಯೂ ಎಲ್ಲಾಫಲವನ್ನು ಬೇರೆಬೇರೆ ಪರೀಕ್ಷಿಸಿನೋಡಿ ಹೇಳಬೇಕು, ರೇಕೆಗಳು ಚನ್ನಾಗಿದ್ದರೆ ಫಲಚನ್ನಾಗುತ್ತೆ ಕೆಟ್ಟುಹೋಗಿದ್ದರೆ ಫಲವೂ ವಿಕಾರವಾಗುತ್ತೆ ರೇಕೆ ಮಲಿನವಾಗಿದ್ದರೆ ಫಲವು ಅಪ್ರಕಾರವಾಗುತ್ತೆ ದೇವಾಂಶಗಳಿಂದಲೂ ರಾಜಲಕ್ಷಣಗಳಿಂದಲೂ ಕೂಡಿದವನೇ ಮಹಾಪುರುಷನು ಹೆಂಗುಸೂ ಅಂಥಾವಳೇ ಫಲಗಳನ್ನು ದೇಶಕಾಲಾನುಸಾರ ಊಹಿಸಿ ತಕ್ಕಂತೆ ಹೇಳಬೇಕು. ಮೊದಲು ಆಯುಷ್ಯವನ್ನು ನಿರ್ಣಯಿಸಿಕೊಂಡು ಆಮೇಲೆ ಇತರಫಲಗಳನ್ನು ಹೇಳಿದರೆ ಪ್ರಯೋಜಕವಾಗುತ್ತೆ ಆಯುರ್ಬಲವಿಲ್ಲದವರಿಗೆ ಲಕ್ಷಣಗಳಿಂದ ಪ್ರಯೋಜನವಿಲ್ಲವು ದೇಹದಲ್ಲಿತೂತು ಅಂಗೈ ಅಂಗಾಲು ಬೆನ್ನು ಹೊಕ್ಕಳು ಲತ ಕೊರಳು ಎದೆ ಹೊಟ್ಟೆ ತೊಡೆ ಮುಂತಾದ ಅಂದರೆ ಕಂಕಳು ಮೊದಲಾದ ಶರೀರವೆಲ್ಲವನ್ನೂ ರೇಕೆಗಳಿಂದೊಡಗೂಡಿರುವ ರೀತಿ ಪರೀಕ್ಷಿಸಿ ಸ್ವರವನ್ನೂ ದೃಷ್ಟಿಯನ್ನೂ ಸ್ವಭಾವವನ್ನೂ ಗುರುಕಟಾಕ್ಷದಿಂದ ತಿಳಿದು, ಫಲಕ್ಕೆ ಸರಿಯಾಗುವಂತೆ ಊಹಿಸಿ ಹೇಳಬೇಕು ರೇಕೆಗಳೆ ದೇವರಮುದ್ರೆಯು ಅದುಳ್ಳಶರೀರವೇ ಸಮುದ್ರವು ಅದರನ್ನು ಕುರಿತು ಈ ಶಾಸ್ತ್ರವೆ ಸಾಮುದ್ರಿಕವು, ಇದು ಸಂಗ್ರಹವಾಗಿ ಹೇಳಲ್ಪಟ್ಟಿತು.

ಇತಿ ಶ್ರೀಪ್ರಹ್ಲಾದ ಸಾಮುದ್ರಿಕ ಶಾಸ್ತ್ರೇಹಸ್ತರೇಖಾಫಲ ವಿವರಣಂ

ತೃತೀಯಪ್ರಕರಣಂ ಸಮಾಪ್ತಂ.
ಶ್ರೀಬೆಂಗಳೂರು ಸಿದ್ಧಾಂತಿ ಶಿವಶಂಕರ ಶಾಸ್ತ್ರೀಣಾ।
ಪ್ರಹ್ಲಾದ ಸಾಮುದ್ರಿಕಸ್ಯ ಕರ್ಣಾಟವಿವೃತಿಕೃತಾ॥







## ಮಹಾದೇವರ ಉವಾಚ.



ಶ್ಲೋ॥ ಅಥಾತಃಸಂಪ್ರವಕ್ಷ್ಯಾಮಿ ಹಸ್ತರೇಖಾವಿಚಾರಕಂ । ದಕ್ಷಿಣೇಪೌ
ರುಷಂಜ್ಞೇಯಂ ವಾಮೇವಾಮಾಕರಂಶುಭಾ॥ ೧॥

ತಾ॥ ಈಶ್ವರ ಹೇಳಿದ್ದೇನೆಂದರೆ ಎಲೈಪಾರ್ವತಿಯೆ ಕೈರೇಖೆಗಳ ವಿಚಾರ
ವನ್ನು ಈಗ ಹೇಳುವೆನು, ಪುರುಷಲಕ್ಷಣವನ್ನು ಬಲಕೈಯಲ್ಲೂ, ಸ್ತ್ರೀಲಕ್ಷಣ
ವನ್ನು ಎಡಗೈಯಲ್ಲೂ ನೋಡಿ ತಿಳಿಯತಕ್ಕದ್ದು.

ಶ್ಲೋ॥ ಯಸ್ಯಮೀನಸಮಾರೇಖಾ ಕರ್ಮಸಿದ್ಧಿಶ್ಚಜಾಯತೇ । ಧನಾಢ್ಯ
ಸ್ಕುಸದಜ್ಞೇಯೋ ಬಹುಪುತ್ರೋನಸಂಶಯಃ॥ ೨।

ತಾ॥ ಯಾವಮನುಷ್ಯನ ಹಸ್ತದಲ್ಲಿ ಮೀನಿನ ಆಕಾರವಾದ ರೇಖೆಇರುತ
ದೋ ಅವನು ಪುಣ್ಯಕರ್ಮಗಳಲ್ಲಿ ಸಿದ್ಧಿಯಂಪಡೆಯುತ್ತಾನೆ ಮತ್ತು ಹಣಗಾರ
ನೂ ಗಂಡುಮಕ್ಕಳುಳ್ಳವನೂ ಆಗುತ್ತಾನೆ ಇದರಲ್ಲಿ ಸಂಶಯವಿಲ್ಲ,

ಶ್ಲೋ॥ ತುಲಾಗ್ರಾಮಸ್ತಥಾರಜ್ಜುಃ ಕರಮಧ್ಯೇಚ ದೃಶ್ಯತೇ । ತಸ್ಯವಾಣಿ
ಜ್ಯಸಿದ್ಧಿಸ್ಸ್ಯಾತ್ಪುರುಷಸ್ಯನಸಂಶಿಯಃ ॥

ತಾ॥ ಯಾರ ಅಂಗೈಲಿ ತಕ್ಕಡಿಯಂತಿರುವ ರೇಖೆಯೂಗ್ರಾಮಾಕಾರವಾ
ದ ರೆಕೆಯೂ, ತೋಳ್ಪರಿಗೆಯಂತಿರುವ ರೇಕೆಯೂ, ಕಾಣಲ್ಪಡುತ್ತೋ ಆ
ಮನುಷ್ಯನಿಗೆ ವಾಣಿಜ್ಯಸಿದ್ಧಯು ಅಂದರೆ ಅವನು ವ್ಯಾಪಾರ ಮೂಲಕವಾ
ಗಿ ಹಣವನ್ನು ಸಂಪಾದಿಸಿ ಸುಖಿಯಾದಾನು.

ಶ್ಲೋ॥ ಪದ್ಮಚಾಪಾದಿಕಂ ಖಡ್ಗಮಷ್ಟಕೋಣಾದಿದೃಶ್ಯತೇ । ಸ್ತ್ರೀಯಾ
ಶ್ಚಪುರುಷಸ್ಯಾಪಿ ಧನವಾನ್ಸಸುಖೀನರಃ॥ ॥೪

ತಾ॥ ಕಮಲಾಕಾರವಾದ ರೇಕೆಯು ಬಿಲ್ಲಿನಾಕಾರವಾದ ರೇಕೆಯು,ಬತ್ತ
ಳಿಕರೇಕೆಯೂ ಕತ್ತಿಗೆಸಮವಾದ ರೇಕೆಯು ಎಂಟು ಕೋಣಾಕಾರ ವಾದರೇ
ಕೆಯು ಆರುಕೋಣ ಮೂರುಕೋಣ ಆಕಾರವಾದ ರೇಕೆಗಳು ಹೆಂಗಸರಿಗಾಗ

ಲಿ ಗಂಡುರರಿಗಾಗಲಿ ಕಾಣಿಸುತ್ತೋ ಅವರ ಸುಖವುಳ್ಳವರು ಹಣವುಳವರು ಆಗುತ್ತಾರೆ.

ಶ್ಲೋ॥ ಶಂಖಚಕ್ರಧ್ವಜಾಕಾರಃ ಮಾಷಾಕಾರಶ್ಚದೃಶ್ಯತೇ । ಸರ್ವವಿದಾಪ್ರದಾನೇನ ಬುದ್ಧಿಮಾರ್ಗಸಪೇನ್ನರಃ॥ ೫॥

ತಾ॥ ಶಂಖಾಕಾರವಾದ ಮತ್ತು ಚಕ್ರಾಕಾರವಾದ ನಿಶಾನೀ ಆಕಾರವಾದ ರೇಕೆಗಳು ಉದ್ದಿಸಕಾಳಿನ ಆಕಾರವಾದ ರೇಕೆಯೂ ಯಾರಹಸ್ತ ದಲ್ಲಿ ಕಾಣ ಲ್ಪಡುತ್ತೊ ಆ ಮನುಷ್ಯನು ಸಮಸ್ತ ವಿದ್ಯಗಳಲ್ಲಿಯೂ ಪ್ರಾಮುಖ್ಯತೆಯಿಂದ ಜ್ಞಾನವಂತ ನಾಗುವನು, ವಿಶೇಷಾಭಿ ಪ್ರಾಯವು ಚಕ್ರವಿದ್ದರೆತರ್ಕಶಾಸ್ತ್ರ ಜ್ಞನಾಗುವನು, ಶಂಖವಿದ್ದರೆ ಜ್ಯೋತಿಶ್ಯಾಸ್ತ್ರಜ್ಞ ನಾಗುವನು ಧ್ವಜವಿದ್ದರೆ ವೇದಾಂತ ವಿದ್ಯಾವಂತ ನಾಗುವನು, ಮಾಷರೇ ಕೆಯಿದ್ದಲ್ಲಿ ಸಂಸಾರಿಕ ವ್ಯಾಪಾರ ವಿದ್ಯಾವಂತ ನಾಗುವನು, ಶಂಖಚಕ್ರಧ್ವ ಜಮಾಷ ರೇಕೆಗಳು ಯಲವೂ ಇದ್ದಲ್ಲಿ ವೇದ ವೇದಾಂಗ ಪುರಾಣ ಪ್ರವೀಣ ನಾಗಿ ಕವಿತಾಶಕ್ತಿ ಯುಳ್ಳವ ನಾಗಿಯೂ ಸಭಾಪೂಜ್ಯ ನಾಗಿಯೂ ಮಹಾ ದೈಶ್ವರ್ಯವಂತ ನಾಗಿಯೂ ಸುಖ ವಾತನಾಗಿಯೂ ಇರುವನ್ನು, ಅಥವಾ ರಾಜ ವಂಶದಲ್ಲಿಯಾಗಲಿ ತತ್ಸದೃಢರಾದವರು ವಂಶದಲ್ಲಿ ಆಗಲಿ ಮೇಲೆಹೇಳಿದ ರೇಕೆಗಳು ಯೆಲ್ಲವೂ ಇದ್ದವರು ಜನ್ಮಿಸುವರು.

ಶ್ಲೋ॥ ತ್ರಿಶೂಲಂಕರಮಧ್ಯೇತು ತೇನರಾಜಾಭವಿಷ್ಯತಿ । ಯಜ್ಞಾಧರ್ಮೇಚದಾನೇಚ ದ್ವಿಜದೇವಪ್ರಪೂಜನೆ । ನಿರತಃ ಪುತ್ರವಾಂಶ್ಚೈವ ಪ್ರತಿಷ್ಠಾತಾಶಿವಶ್ಯಾಚ ॥ ೬॥

ತಾ॥ ಹಸ್ತಮಧ್ಯದಲ್ಲಿ ತ್ರಿಶೂಲರೇಕೆಯಿದ್ದಲ್ಲಿ ಅದರಿಂದ ಯಜ್ಞದಲ್ಲಿಯೂ ಧರ್ಮದಲ್ಲಿಯೂ ಕೊಡುವಿಕೆಯಲ್ಲಿಯೂ ದೇವಬ್ರಾಹ್ಮಣರ ಪೂಜೆಯಲ್ಲಿಯೂ ಆಸಕ್ತನಾದಂಥಾ ಗಂಡುಮಕ್ಕಳುಳ್ಳಂಥಾ ಈಶ್ವರಪ್ರತಿಷ್ಠೆ ಮಾಡುವಂಥಾ ಧೊರೆಯು ಆಗುತ್ತಾನೆ, ಈ ತ್ರಿಶೂಲರೇಕೆಯು ಸ್ತ್ರಿಗೂ ಇದ್ದಲ್ಲಿ ಧೊರಗೆಪಟ್ಟದ ಹೆಂಡತಿ ಯಾಗುವಳು, ತ್ರಿಶೂಲ ರೇಕೆಯು ಮಾಸಿದ ಹಾಗೆ ಇದಲ್ಲಿ ಗೃಹುಬನ ಆಶ್ರಯಮೂಲಕನಾಗಿ ಜೀವನ ಮಾಡುತ್ತಾ ಸುಖವಾಗಿರುವನು.

ಶ್ಲೋ॥ ಶಕ್ತಿತೋಮರಬಾಣೈಶ್ಚ ಕರಮಧ್ಯೇತು ದೃಶ್ಯತೇ । ರಥಚಕ್ರಧ್ವಜಾಕಾರ್ಯ ಸ್ವಚರಾಜ್ಯಂಲಭೇನ್ನರಃ ॥ ೭॥

ತಾ॥ ಮನುಷ್ಯನ ಹಸ್ತಮಧ್ಯದಲ್ಲಿ ಈಟಿಬೀಸುಕತ್ತಿ ಅಂದರೆ ಪಟ್ಟಾಕತ್ತಿ ಬಾಣಂತೇರು ಚಕ್ರಬಾಪುಟ ಈಚಿಹ್ನೆಗಳು ಇದ್ಧರ ಅವನು ದೇಶಾಧಿಪತ್ಯವನು ಮಾಡುತ್ತಾನೆ.

ಶ್ಲೋ ॥ ಅಂಕುಶಂಕುಂಡಲಂಚಕ್ರಂ ಯಸ್ಯಪಾಣಿತಲೇಭವೇತ್ । ತಸ್ಯ ರಾಜ್ಯಂಮಹಶ್ರೇಷ್ಟಂ ಸಾಮುದ್ರವಚನಂತಥಾ ॥ ೮॥

ತಾ॥ ಯಾವಮನುಷ್ಯನ ಕೈಯೊಳಕೆ ಅಂಕುಶರೇಖೆಯು ಕುಂಡಲದ ಚಿಹ್ನವೂ ಗಾಲಿಯಚಿಹ್ನವೂ ಉಂಟಾಗಿರುತ್ತೋ ಆ ಮನುಷ್ಯನಿಗೆ ಅತ್ಯುತ್ತಮವಾದ ದೇಶಾಧಿಪತ್ಯ ವುಂಟಾಗುತ್ತೆಂದು ವಿಷ್ಣು ಹೇಳಿದ್ದಾನೆ ಮತ್ತು, ಅಂಕುಶಕುಂಡಲ ಚಕ್ರಗಳೆಂಬ ಮೂರುಚಿಹ್ನಗಳಾ ಇದ್ದರೆ ಅತ್ಯುತ್ತಮವಾದ ಧೊರೆಯಾಗುವನು. ಒಂದು ಚಿಹ್ನಮಾತ್ರವಿದ್ದರೆ ಸಾಮಾನ್ಯರಾಜಭೋಗಗಳನ್ನು ಅನುಭವಿಸುವನು, ಎರಡುಚಿಹ್ನಗಳುಮಾತ್ರವಿದ್ದಲ್ಲಿರಾಜ ಧನಮಾಲಕನಾಗಿ ಐಶ್ವರ್ಯಭೋಗವಂ ಪಡೆಯುವನು.

ಶ್ಲೋ ॥ ಗಿರಿಕಂಕಣಯೋನೀನಾಂ ನರಮುಂಡಕರೀಂಯೋಃ । ಕರೆವ್ಯೈ ಯಸ್ಯಚಿಹ್ನಾನಿ ರಾಜಮಂತ್ರೀಭವೇನ್ನರಃ ॥ ೯॥

ತಾ॥ ಯಾವಮನುಷ್ಯನ ಹಸ್ತದಲ್ಲಿ ಪರ್ವತಕಡಗ ಮನುಷ್ಯಮುಂಡ ಕೊದಗಳಿರುತ್ತವೆಯೋ ಆ ಮನುಷ್ಯನು ರಾಜ ಮಂತ್ರಿಯಾಗುವನುಗಿರಿ ಕಂಕಣ ಯೋನಿ ನರ ಮುಂಡ ಘಂಟಿ ಈ ಆರುಚಿಹ್ನೆಗಳು ಇದ್ದರೆರಾಜ ಮಂತ್ರಿಯಾಗುವನು, ಇವುಗಳಲ್ಲಿ ಕಮ್ಮಿಯಾಗಿ ಯಾವದಾದರು ಇದ್ದಲ್ಲಿ ದೊಡ್ಡ ಮನುಷ್ಯರ ಆಶ್ರಯದಲ್ಲಿ ಇರುವನು, ಮತ್ತು ಅವರುಗಳ ಆಲೋಚನಾಕಾರ್ಯಗಳಲ್ಲಿ ಸೇರಿ ಇರುವನು.

ಶ್ಲೋ ॥ ಸೂರ್ಯಚಂದ್ರಲತಾನೇತ್ರೈ ರಷ್ಟಕೋಣತ್ರಿಕೋಣಕೈಃ । ಗಜಾಶ್ವಮಂವಿರ್ಕೈರ್ಯ್ಯಾಯೆ ಸಾಧ್ಧನೀಚಾಪಿಸುಖೀನರಃ ॥ ೧೦॥

ತಾ ॥ ಮನುಷ್ಯನ ಹಸ್ತದಲ್ಲಿ ಸೂರ್ಯ ಚಂದ್ರ ಬಳ್ಳಿಕಣ್ಣು ಎಂಟುಮೂಲೆಚಕ್ರ ತ್ರಿಕೋಣಚಕ್ರ ಆನೆ ಕುದುರೆ ಮನೆ ಈ ಗುರುತುಗಳು ಇದ್ದರೆ ಧನವಂತನೂ ಸುಖಿಯೂ ಆಗುವನು, ಯಾವಯಾವವಿಧವಾದ ಜೀವಿಗಳಗುರ್ತು ಇರುತ್ತವೆಯೋ ಅಯಾಜೀವಿಗಳು ಆ ಮನುಷ್ಯನ ಪೋಷಣೆಗೆ ಒದಗಿ ಇರುತ್ತವೆ.

ಶ್ಲೋ ॥ ಆದಾಮಿಕಾಪೂರ್ವಮೂಲೇ ಕನಿಷ್ಠಾದಿಕ್ರಮೇಣತು । ಆಯುರ್ದಶ್ಶೈವವರ್ಷಾಣಿ ಸಾಮುದ್ರದಚನಂತಥಾ ॥ ೧೧॥

ತಾ ॥ ಮನುಷ್ಯನ ಹಸ್ತದಲ್ಲಿ ಕಿರಿಬೆರಳಿನಬುಡದಕೆಳಗಿನಿಂದ ಆಯುಷ್ಯರೇಖೆಯು ಹುಟ್ಟಿ ಅನಾಮಿಕೆಯ ಬುಡದವರಿಗೆಸೇರಿ ಇದ್ದರೆ ಹತ್ತುವರ್ಷದ ಆಯುಷ್ಯವೆಂದು ವಿಷ್ಣುವಿನುಕ್ತಿ.

ಶ್ಲೋ ॥ ತರ್ಜನೀಮೂಲಪರಿವ್ಯಾಪ್ತಂ ಕನಿಷ್ಟಾದಿಕ್ರಮೇಣತತ್।ಆಯುಷ್ಯವಿಂಶತೇಃಷಟ್ಕಂ ರಕ್ತರೇಖಾಚಿಪೃಶ್ಯತೇ ॥ ೧೨॥

ತಾ॥ ಆಯುರಾಯುಷ್ಯದಗೆರೆಯು ಕನಿಷ್ಠಾದಿಕ್ರಮದಿಂದ ತರ್ಜನೀಬೆಟ್ಟಿನಬುಡದವರಿಗೆ ಸೇರಿಯಿದ್ದು ಕೆಂಪುಬಣ್ಣವುಳ್ಳದ್ದಾಗಿ ಇದರೆ ಆ ವ್ಯಕ್ತಿಮನುಷ್ಯನು ನೂರಯಿಪ್ಪತ್ತುವರ್ಷ ಜೀವಿಸುವನು.

ಶ್ಲೋ॥ ಯದಾರೇಖಾಂತರೈರ್ಭಿನ್ನಾ ಸ್ವಯಂಭಿನ್ನಾಚದೃಶ್ಯತೇ । ತಥಾಸಮೃಗ್ವಿಜಾನೀಯಾದ್ಗಂಡಕಾಲಂವಿಶೇಷತಃ ॥ ೧೩॥

ತಾ॥ ಯಾವಾಗ ಈ ಆಯುಷ್ಯರೇಖೆಯು ಸ್ವತಃಛಿದ್ರಛಿದ್ರವಾಗಿಕಂಡರು ಅಡ್ಡರೇಖೆಗಳಿಂದ ಕೂಡಿದ್ದಾಗಿಯೂ ಇದ್ದರೆ ಆಖಂಡಗಳು ಗಂಡಕಾಲಗಳೆಂದು ಊಹಿಸತಕ್ಕದ್ದು.

ಶ್ಲೋ॥ ಸಾನಮಾಚೇದಧೋಭಾಗೆ ಕನಿಷ್ಠಾದಿಕ್ರಮೇಣತು । ವೃಕ್ಷದುನ್ನತದೇಶಾದ್ವಾ ವಾನತ್ವತನಂಭವೇತ್ ॥ ೧೪॥

ತಾ॥ ಆಯುಷ್ಯರೇಖೆಯು ಕನಿಷ್ಠಾದಿಕ್ರಮದಿಂದ ಕೆಳಗಿನ ಪ್ರದೇಶಕ್ಕೆ ಬಾಗಿಯಿದ್ದರೆ ಗಿಡಗಳಮೇಲಿನಿಂದಾಗಲೀ ಎತ್ತರವಾದ ಸ್ಥಲದಿಂದಾಗಲೀ ಅಶ್ವಾದಿವಾಹನಗಳಿಂದಾಗಲೀ ಕೆಳಕ್ಕೆ ಬೀಳುವನು.

ಶ್ಲೋ॥ ಅಂಗುಷ್ಠೆಚೋರ್ಧ್ವರೇಖಾತು ವರ್ತತೇನೃಪತಿಶ್ಶುಭಾ । ಸೇನಾಪತಿರ್ಧನೇಶಶ್ಚ ಮಧ್ಯಮಾಯುರ್ಭವೇನ್ನರಃ ॥ ೧೫॥

ತಾ॥ ಹೆಬ್ಬೆರಳಿನಲ್ಲಿ ಶುಭಕರವಾದ ಪೂರ್ಧ್ವರೇಖೆಯು ಇರುವ ಮನುಷ್ಯನು ಧೊರೆಯಾದರೂ ಸೇನಾಧಿಪತಿಯಾದರು ಅಥವಾ ಧನಿಕನಾದರೂ ಆಗುವನು, ಅದರೆ ಅವನು ಮಧ್ಯಾಯುಷ್ಯನಂತನು ಆಗುವನು.

ಶ್ಲೋ॥ ತರ್ಜನೀಮೂಲಪರ್ಯಂತ ಮೂರ್ಧ್ವರೇಖಾಚದೃಶ್ಯತೇ। ರಾಜದೂತೋಭವೇತ್ತಸ್ಯ ಧರ್ಮನಾಶಶ್ಚಜಾಯತೇ ॥ ೧೬॥

ತಾ॥ ಉರುಟುಬೆರಳಿನ ಬುಡದವರಿವಿಗೆ ಊರ್ಧ್ವರೇಖೆಯು ಇದ್ದರೆಅಂಥಾಮನುಷ್ಯನುಧೊರೆಗೆಸೇವಕನಾದನು ಅವನಿಗೆ ದ್ರವ್ಯನಾಶವಾಗುತ್ತೆ

ಶ್ಲೋ॥ ಮಧ್ಯಮಾಮೂಲಪರ್ಯಂತ ಮೂರ್ಧ್ವರೇಖಾಚದೃಶ್ಯತೇ । ಪುತ್ರಪೌತ್ರಾದಿಸಂಪನ್ನೊಧನವಾಸಸುಖೀನರಃ ॥ ೧೭॥

ತಾ॥ ಪುರುಷನಹಸ್ತದಲ್ಲಿ ನಿಡುರೇಖೆಯು ನಡುಬೆರಳಿನಬುಡವನ್ನುಸೇರಿಯಿದ್ದರೆ ಅಂಥವನು ಮಕ್ಕಳು ಮೊಮ್ಮಕ್ಕಳು ಧನವು ಸುಖವು ವುಳ್ಳವನಾಗುವನು.

ಶ್ಲೋ॥ ಅನಾಮಿಕೋರ್ಧ್ವರೇಖಾಂಗೂಂ ವ್ಯವಸಾಯೀಧನಾಧಮಃಸುಖದುಃಖೇನಜೀವೇತ ಪುತ್ರಪೌತ್ರಗೃಹಾದಿಷು ॥ ೧೮॥

ತಾ॥ ಅಂಗೈಲಿ ನಿಡುರೇಖೆಯೂ ತರ್ಜನೀಬೆರಳಬುಡ ಸೇರಿದ್ದರೆ ಅಂಥವನಿಗೆ ಉದ್ಯೋಗವ್ಯವಸಾಯ (ಆರಂಭ) ಇವುಗಳಿಂದ ಧನನಾಗಮವುಂಟು

ಸಂಸಾರದಲ್ಲಿ ಸುಖದುಃಖಗಳು ಸಮಾನನಾಗಿ ಕುಳಿತು ಇರುವವು.

ಶ್ಲೋ॥ ಯಸ್ಯಪಾಣೌವೂರ್ಧ್ವರ್ತೇಖಾ ಕನಿಷ್ಠಾಮೂಲ ಸಂಸ್ಥಿತಾ। ತೇನ ನರಾಃ ಪರದೇಶೇಷು ಶತಮಾಯುರ್ಬ್ಬಜಂತಿತೇ ॥ ೧೯

ತಾ॥ ಯಾವಮನುಷ್ಯನ ಅಂಗೈಲಿ ಕಿರುಬೆರಳ ಬುಡಕ್ಕೆ ತಗುವಂತ ನಿಡುರೇಕೆಯು ಇದೆಯೋ ಅವನು ಪರಸ್ಥಳಗಳಲ್ಲಿ ದೀರ್ಘಾಯುಷ್ಮಂತ ನಾಗಿ ಇರುವನು.

ಶ್ಲೋ॥ ಆಯುರ್ಬ್ಬಲೇಭವೇದ್ರೇಖಾ ಮಧ್ಯಮಾಮೂಲಸಂಸ್ಥಿತಾ। ಪಂ ಚಸಪ್ತತಿವರ್ಷಾಣಿ ಆಯುಷ್ಯೋಬಲಮುಚ್ಯತೇ ॥ ೨೦

ತಾ॥ ಆಯೂರ್ರೇಕೆಯು ನಡುಬೆರಳಿನ ಬುಡದವರಿಗೆ ಬಂದಿದ್ದರ ಎಪ್ಪ ತ್ತೈದು ವರುಷ ಆಯುಷ್ಯವೆಂದು ಹೇಳಬೇಕು.

ಶ್ಲೋ॥ ಮಧ್ಯಮಾಮೂಲ ಪರ್ಯಂತಂ ಆಯೂರೇಖಾನದೃಶ್ಯತೆ । ಚ ತುರ್ದಶಚತುರ್ವಿಂಶ ದಾಯುರ್ಬ್ಬಲವಿನಾಶನಂ ॥ ೨೧

ತಾ॥ ಆಯುರೇಕೆಯು ನಡುಬೆರಳಿನ ಬುಡದವರಿಗೆ ಕಾಣಿಸದೆ ಇದ್ದ ರ ೧೪ ಅಥವಾ ೨೪ ವರುಷಗಳು ಆಯುರ್ಬ್ಬಲದಲ್ಲ ಕಮ್ಮಿಯಾಗುವದು ಅಂ ದರ ಹಿಂದೆ ಹೇಳಿದ ೫ ವರುಷಗಳ ಆಯುಷ್ಯದಲ್ಲಿ ೧೪ ೨೪ ಕಮ್ಮಿ ಆಂದ ರ ೧೫ ಅಥವಾ ೧೬ ವರುಷಗಳು ಆಯುಷ್ಯವೆಂದು ತಿಳಿಯತಕ್ಕದ್ದು.

ಶ್ಲೋ॥ ಆಯುರ್ಭ್ಯಲೇಭವೇದ್ರೇಖಾ ನಾಮಿಕಾಮೂಲ ಸಂಸ್ಥಿತಾ । ತ್ರಿ ದಶಂಚತ್ರಿಷಷ್ಟಿಟ್ಟ ಆಯುರ್ಬ್ಬಲವಿನಾಶನಂ ॥ ೨೨॥

ತಾ॥ ಆಯೂರೇಕೆಯು ಅನಾಮಿಕೆಯ ಬುಡದವರಿವಿಗೂ ಬಂದುಇದ್ದ ರ ೬೩ ಅಥವಾ ೩೦ ವರುಷಗಳವರಿಗೆ ಆಯುಷ್ಯವಿರುವದು.

ಶ್ಲೋ॥ ಅಂಗುಳೀನಾಂ ಪೃಥಕ್‌ರೇಖಾ ಗಣ್ಯತೇತ್ರಿತಯಂ ಪೃಥಕ್‌ರೇ ಖಾದ್ವಾದಶಕಂಸಾಖ್ಯಂ ಧನಧಾನ್ಯಪ್ರದಾಯಕಂ ॥ ೨೩॥

ತಾ॥ ಬೆರಳುಗಳಲ್ಲಿರುವ ಗೆರೆಗಳು ಒಂದೊಂದು ಬೆರಳಿನಲ್ಲಿ ಮೂರು ಮೂರಾಗಿ ಒಟ್ಟು ಹನ್ನೆರಡು ಗೆರೆಗಳು ಇದ್ದರೆ ಸೌಖ್ಯವನ್ನು ಧನಧಾನ್ಯಗ ಳನ್ನು ಕೊಡುವವು.

ಶ್ಲೋ॥ ಅಂಗುಳೀನಾಂಪೃಧಗ್ರೇಖಾ ಕಲನೇಚೇತ್ರಯೊದ್ । ಮಹಾ ದುಃಖಂಮಹಾಕ್ಲೇಶಂ ಸಾಮುದ್ರವ ಚನಂತಥಾ॥ ೨೪॥

ತಾ॥ ಬೆರಳಗೆರೆಗಳೆಲ್ಲವನ್ನೂ ಕೂಡಿಸಲು ಹದಿಮೂರು ಲೆಕ್ಕವಾದರೆ ಬಹಳದುಃಖವೂ ಬಹುಕ್ಲೇಶವೂ ವುಂಟಾಗುವದು.

ಶ್ಲೋ॥ ಅಂಗುಳೀನಾಂಪೃಥಕ್‌ರೇಖಾ ಗಣನೇಚೇಚ್ಚತುರ್ದಶ । ಮಹಾ ಸುಖೀಮಹಾಭೋಗೀ ಸಾಮುದ್ರವಚನಂತಥಾ ॥ ೨೫॥

ತಾ॥ ಬೆರಳುಗಳ ಬೇರೆ ಬೇರೆ ಗೆರೆಗಳೆಲ್ಲವನ್ನೂ ಕೂಡಿಸಿದಲ್ಲಿ ಹದಿ ನಾಲ್ಕು ಆದರೆ ಬಹಳಸುಖವುಳ್ಳವನೂ ಬಹುಳಭೋಗವುಳ್ಳವನು ಆಗುವನು.

ಶ್ಲೋ॥ ರೇಖಾಪಂಚದಶೇಚೋರಃ ಷೋಡಶೇದ್ಯೂವಂಚಕಃ । ಪಾಪೀಸಪ್ತದಶೇಜ್ಞೇಯೋ ಧರ್ಮಾತ್ಮಾಷ್ಟಾದಶೇಭವೇತ್॥ ೨೬॥

ತಾ॥ ಬೆರಳು ಗೆರೆಗಳನ್ನು ಕೂಡಿಸಿದಲ್ಲಿ ೧೫ ಆದರೆ ಕಳ್ಳನಾಗು ವನು. ೧೬ ಆದರೆ ಜೂಜಿನಲ್ಲಿ ಹರವನ್ನು ಮೋಸಗೊಳಿಸುವನು, ೧೭ ಆದರೆ ಪಾಪಿಯಾಗುವನು, ೧೮ ಆದರೆ ಧರ್ಮಿಷ್ಟನಾಗುವನು.

ಶ್ಲೋ॥ ಊನವಿಂಶೆಭವೇನ್ನಾನ್ಯೋ ಗುಣಜ್ಞೋಲೋಕಪೂಜಿತಃ । ತಪಸ್ವೀವಿಂಶತಾಜ್ಞೇಯೋ ಮಹಾತ್ಮಾಚೈಕವಿಂಶತಾ॥ ೨೭॥

ತಾ॥ ಐದುಬೆಟ್ಟುಗಳಿಂದಲೂ ೧೯ ಗೆರಗಳಾದರೆ ಪೂಜ್ಯನೂ ಗುಣಜ್ಞನು ಲೋಕಪೂಜಿತನೂ ಆಗುವನು, ೨೦ಗೆರೆಗಳು ಇದ್ದರೆ ತಪ್ಪಸ್ಸಿ ಯಾಗುವನು ೨೧ ಗೆರೆಗಳಾದರೆ ಮಹಾತ್ಮನೆಂದು ತಿಳಿಯತಕ್ಕದ್ದು.

ಶ್ಲೋ॥ ಅಂಗುಳಿನಾಂಪರ್ವಮಧ್ಯೇ ಸಾಂಗುಷ್ಟಂಚಾಗ್ರಪರ್ವಚ । ಪರಿತಜ್ಯಾಂಗುಳೀಪರ್ವ ರೇಖಾಗಣನ ತೋಯತಃ ॥ ಚತುರಂ ಗುಳಿಕಾಪರ್ವಾಣ ರೇಖಾಯು ತಾನಿಚೇತ್ । ಶುಭಭೋಗಯು ತೋಭೂಯಾದ್ದ ನಪಾಂಶ ಭವಿಷ್ಯತಿ॥ ೨೮॥

ತಾ॥ ಬೆರಳುಗಳಗಣ್ಣು ಗಳನಡುವೆ ಹೆಬ್ಬಟ್ಟಿನಿಂದ ಇತರ ಬೆರಳು ಗಳ ಕೊನೆ ಗೆಣ್ಣುಗಳನ್ನು ಬಿಟ್ಟು ಬೆರಳುಗಳಲ್ಲಿರುವ ಗೆಣ್ಣುಗಳಮಧ್ಯ ಇರುವ ರರೆಗಳಲೆಖ್ಖದ ಕನಿಷ್ಟಾ ಅನಾಮಿಕಾ ಮಧ್ಯಮ ತರ್ಜನೀಯೆಂಬ ನಾಲ್ಕು ಬೆರಳುಗಳ ಗೆಣ್ಣುಗಳು ಎಂಟೆಂಟು ಗೆರಗಳಿಂದ ಕೂಡಿಯಿದ್ದರೆ ನಾಲ್ಕು ಬೆರಳುಗಳಿಂದ ೩೨ ಆಗುವವು ಹಾಗೆಯಿದ್ದರೆ ಶುಭವಾದ ಸುಖಾನು ಭವ ವುಳವನು ದ್ರವ್ಯವುಳ್ಳವನುಆಗುತ್ತಾನೆ.

ಶ್ಲೋ॥ ಸತ್ರೈಕತ್ರಿಂಶತಿಸ್ಸ್ಯಾಚ್ಛ್ರೇ ದುಃಖವಾಂಚ ಭವಿಷ್ಯತಿ । ತ್ರಯಸ್ತ್ರಿಂಶಚ್ಚ ಷಸ್ತ್ರಿಂಶದ್ದು ಲಕ್ಷ್ಮಿ ಸಹಾಯುಕ್ತತ್॥ ೨೯॥

ತಾ॥ ಹೆಬ್ಬೆಟ್ಟನ್ನು ಇತರಬೆಟ್ಟೆಗಳ ಕೊನೆಗೆಣ್ಣನ್ನು ಸಹಾಬಿಟ್ಟು ನಾಲ್ಕು ಬೆರಳುಗಳ ಇತರ ಗೆಣ್ಣುಗಳಲ್ಲ ಮುವ್ವತೊಂದು ಗೆರೆಗಳು ಉಂಟಾದದಲ್ಲಿ ಶೋಕ ವುಕ್ತವನಾಗುತ್ತಾನೆ, ಮೂವತ್ತು ಮೂರು ಗೆರೆಗಳು ಮುವ್ವತ್ತಾರು ಗೆರಗಳು ಉಂಟಾಗಿ ಇದ್ದರೆ ದ್ರವ್ಯಸಂಪತ್ತು ಹಾಯವನ್ನುಂಟು ಮಾಡುವದು.

ಶ್ಲೋ॥ ಏಕಚಕ್ರಸ್ಸದಾಭೋಗೀ ದ್ವಿಚಕ್ರೋ ರಾಜಪೂಜಿತಃ । ಧನನಾಢ್ಯಸ್ತುತ್ರಿಭಿಶ್ಚಕ್ರೈ ಚತುಶ್ಚಕ್ರೋದರಿದ್ರಕಃ ॥ ೩೦॥

ತಾ॥ ಒಂದುಚಕ್ರ ವಿದ್ದವನು ಯಾವಾಗಲೂ ಸುಖವುಳ್ಳವನು, ಎರಡು ಚಕ್ರಗಳುಳ್ಳವನು ಧೊರೆಗಳಿಂದ ಮರ್‍ಯಾದಾರ್ಹನಾಗಿರುವನು, ಮೂರುಚಕ್ರಗಳಿಂದ ಕೂಡಿದವನು ಹಣವಂತನಾಗುವನು, ನಾಲ್ಕುಚಕ್ರಗಳುಳ್ಳವನು ಬಡತನವುಳ್ಳವನಾಗುತ್ತಾನೆ.

ಶ್ಲೋ॥ ವಿಲಾಸೀಪಂಚಚಕ್ರೇಣ ಷಟ್ಚಕ್ರೇಣಸಕಾಮುಕಃ। ಸಪ್ತಚಕ್ರೇಣಶುಭವಾನ್ ಅಷ್ಟಚಕ್ರೇಣರೋಗವಾನ್ ॥ ೩೧॥

ತಾ॥ ಐದುಚಕ್ರಗಳಿಂದ ಸ್ತ್ರೀವಿಲಾಸ ವುಳ್ಳವನಾಗುವನು, ಆರುಚಕ್ರಗಳಿಂದಕಾಮವುಳ್ಳವನಾಗುವನು, ಏಳುಚಕ್ರಗಳಿಂದ।ಶುಭವುಳ್ಳವನು ಆಗುವನು ಎಂಟುಚಕ್ರಗಳಿಂದ ಜಾಡ್ಯವುಳ್ಳವನು ಆಗುತ್ತಾನೆ.

ಶ್ಲೋ॥ ಭೂಪಾಲೋನವಚಕ್ರೇಣ ದಶಚಕ್ರೇಣಯೋಗವಾನ್। ಏವಂ ಚಕ್ರಫಲಂದೃಶ್ಯಂ ಸಾಮುದ್ರವಚನಂತಥಾ॥ ೩೦॥

ತಾ॥ ಒಂಭತ್ತುಚಕ್ರಗಳಿಂದ ಧೊರೆಯಾಗುವನು ಹತ್ತುಚಕ್ರಗಳಿಂದ ಯೋಗೀಯಾಗುತ್ತಾನೆ ಈಪ್ರಕಾರವಾಗಿಚಕ್ರಗಳು ಇರುವದ್ದರಿಂದಲುಂಟಾಗುವ ಪ್ರಯೋಜನವನ್ನು ತಿಳಿಯತಕ್ಕದ್ದು॥ ೩೦॥

ಶ್ಲೋ॥ ಏಕಶಂಖೀಸುಖೀಭೋಗೀದ್ವಿಶಂಖೀನದರಿದ್ರವಾನ್। ಚತುಶ್ಶಂಖೀನಗುಣವಾನ್ ತ್ರಿಶಂಖೀನಾಗುಣೀಭವೇತ್॥ ೩೩॥ ನಿರ್ಧನಂಪಂಚಶಂಖೀಸ್ಯಾತ್ ಷಟ್ಶಂಖೀನ ಪ್ರತಾಪವಾನ್। ಸಪ್ತಾದಿದಶಶಂಖಾಂತಂ ರಾಜಚಿಹ್ನಾನಿದೃಶ್ಯತೇ॥ ೩೩॥

ತಾ॥ ಒಂದು ಶಂಖವುಳ್ಳವನು ಸುಖವುಳ್ಳವನು ಭೋಗವುಳ್ಳವನು ಆಗುವನು ಎರಡುಶಂಖಗಳು ಇರುವದ್ದರಿಂದ ಬಡತನವುಳ್ಳವನು ಆಗುತ್ತಾನೆ ನಾಲ್ಕುಶಂಖಗಳು ಇರುವದ್ದರಿಂದ ಸಿದ್ಗುಣವುಳ್ಳವನಾಗುವನು ಮೂರುಶಂಖಗಳಿರುವದ್ದರಿಂದ ದುರ್ಗುಣವುಳ್ಳವನಾಗುತ್ತಾನೆ.

ಶ್ಲೋ॥ ನಿರ್ಧನೀಪಂಚಶಂಖಿಶೀನಷಟ್ಶಂಖೀನಪ್ರತಾಪವಾನ್। ಸಪ್ತಾದಿದಶಶಂಖಾಂತಂರಾಜಚಿಹ್ನಂಪ್ರದೃಶ್ಯತೇ॥ ೩೪॥

ತಾ॥ ಐದುಶಂಖಗಳಿರುವದ್ದರಿಂದ ಹಣವಿಲ್ಲದವನು ಆರು ಶಂಖಗಳಿಂದ ಸಾಮರ್ಥ್ಯವುಳ್ಳವನು ಏಳುಶಂಖಮೊದಲೊಂಡು ಹತ್ತುಶಂಖಗಳವರಿಗೂ ಇದ್ದಲ್ಲಿಧೊರೆತನ ಮಾಡುವವನ ಗುರ್ರುತುಗಳೆಂದುಕಾಣಬರುತ್ತೆ ಏಳುಶಂಖಗಳಾಗಲಿ ಎಂಟುಶಂಖಗಳಾಗಲಿ ಒಂಭತ್ತು ಶಂಖಗಳಾಗಲಿ ಹತ್ತುಶಂಖಗಳಾಗಲಿ ಇದ್ದರೆ ಧೊರೆಯಾಗುವನೆಂದು ತಾತ್ಪರ್ಯವು.

ಶ್ಲೋ॥ ಏಕಶೀಪೇನಗುಣವಾನ್‌ವಕ್ತಾಭೂಯಾದ್ವಿಶೀಪತಃ। ಧನಾಢ್ಯಸ್ತ್ರಿಶೀಪೇನಚತುಶ್ಶೀಪೇನಸದ್ಗುಣಿ॥ ೩೫॥

ತಾ॥ ಒಂದುಶೀಪವೆಂಬ ಚಿಹ್ನ ವಿದ್ದರೆ ಗುಣವಂತನು ೨ ಶೀಪಗಳಿದ್ದರೆ ವಾಚಾಲಕನು ಮೂರುಶೀಪಗಳಿದ್ದರೆಹಣವುಳ್ಳವನು ನಾಲ್ಕುಶೀಪಗಳಿದ್ದರೆ ಒಳ್ಳೇಗುಣವುಳ್ಳನು ಆಗವನು ಶೀಪವಂದರೆ ಬಸವನ ಬೆನ್ನಿನಮೇಲೆಇರುವಚಿಪ್ಪಿನಂತೆ ಇರುವಗುರ್ತು.

ಶ್ಲೋ॥ ಚತುಶ್ಶೀಪಾದಿದಶಕಶೀಪಾಂತಂವೃದ್ಧಿ ರ್ಮಭವೇತಾ ॥

ತಾ॥ ನಾಲ್ಕುಶೀಪಚಿಹ್ನವೊದಲಾಗಿ ಹತ್ತುಶೀಪಚಿಹ್ನಗಳ ವರಿವಿಗೂಇದ್ದರೆ ಧನಧಾನ್ಯಾದಿ ವೃದ್ಧಿಯುಳ್ಳವನಾಗುವನು.

ಶ್ಲೋ ॥ ರೇಖೈಕಾಮಣಿಬಂಧೇತುರಾಜಭೋಗೀಭವೇನ್ನರಃ । ಯದಿದ್ವೌಸಗುಣೀವಕ್ತಾ ಧಸವಾಂಶ್ಚಭವಿಷ್ಯತಿ ॥ ೩೮॥

ತಾ॥ ಮಣಿಕಟ್ಟಿನಲ್ಲಿ ಒಂದುರೇಖೆಯು, ಇದ್ದಲ್ಲಿಮನುಷ್ಯನುರಾಜಭೋಗ ವುಳ್ಳವನಾಗುವನು ಎರಡುರೇಖೆಗಳು ಇದ್ದರೆಗುಣವಂತನೂ ವಾಗ್ಮಿಯೂ ಹಣವುಳ್ಳವನೂ ಆಗುತ್ತಾನೆ,

ಇತಿಹರಗೌರೀ ಸಾಮುದ್ರಿಕಸಂಗ್ರಹಃ,



## ವರಾಹಮಿಹಿರ ಸಾಮುದ್ರಿಕಶಾಸ್ತ್ರವು,

ಶ್ಲೋ॥ ಅಸ್ವೇದನಂಮೃದುತಲೌ ಕಮಲೋದರಾಭೌ । ಶ್ಲಿಷ್ಟಾಂಗುಳೀರುಚಿರತಾಮ್ರನಖೌಸುಪಾರ್ಷ್ಣೀ ॥ ಉಷ್ಣಾಶಿರಾವಿರಹಿತಾಸುನಿಗೂಢಗುಲ್ಫೌ । ಕೂರ್ಮೋನ್ನತೌಚಚರಣಾವುನುಜೇಶ್ವರಸ್ಯ ॥ ೧॥

ತಾ ॥ ದೊರೆಯಪಾದಗಳು ಬೆವರುಹಿಡಿಯದೆ ಸ್ವಭಾವವುಳ್ಳವುಗಳಾಗಿಯೂ ಮೆತ್ತಗಿರುವ ಕೆಳಭಾಗವುಳ್ಳವುಗಳಾಗಿಯೂ, ಕಮಲೋದರಕಾಂತಿಯುಳ್ಳವುಗಳಾಗಿಯೂ, ಸೇರಿಕೆಯುಳ್ಳ ಬೆರಳುಗಳುಳ್ಳವುಗಳಾಗಿಯೂ, ತಾಂಮ್ರದಂತೆಕೆಂಪಡರ್ದ ಉಗುರುಗಳುಳ್ಳವುಗಳಾಗಿಯೂ, ಸೊಗಸಾದ ಪಕ್ಕಗಳುಳ್ಳವುಗಳಾಗಿಯೂ, ಬೆಚ್ಚಗಿರುವಂಥಾವುಗಳಾಗಿಯೂ ನರಗಳು ಕಾಣದಿರುವಂಧವುಗಳಾಗಿಯೂ, ವ್ಯಕ್ತಾವ್ಯಕ್ತವಾಗಿ ಸೊಗಸಾಗಿರುವ ಚೀಲಮಂಡೆಗಳುಳ್ಳವುಗಳಾಗಿಯೂ ಇರುವವು.

ಶ್ಲೋ॥ ಪ್ರವಿರಳತನುರೋಮವೃತ್ತಜಂಘಾ । ದ್ವಿರದಕರಪ್ರತಿಮೈರ್ವರೋಭಿಶ್ಚ ॥ ಉಪಚಿತಸಮಜಾನವಶ್ಚಭೂಪಾ । ಧನರಹಿತಾಃಶ್ವಸೃಗಾಲತುಲ್ಯಜಂಘಾಃ ॥ ೨॥

ತಾ ॥ ರಾಜರಾದವರು ಮೈಯಲ್ಲಿಕೂದಲು, ದೂರದೂರವಾಗಿ ಗುಂಡಗಿರುವ ಜಂಘೆಗಳುಳ್ಳವರಾಗಿಯೂ, ಆನೆಯಸೊಂಡಿಲಿನಂತಿರುವ ತೊಡೆ

ಗಳಿಂದ ಕೂಡಿದವರಾಗಿಯೂ, ನಯವಾಗಿಯೂ, ಸಮವಾಗಿಯೂ, ಇರುವ ಮೊಳಕಾಲುಗಳುಳ್ಳವರಾಗಿಯೂ, ಇರುವವರು ನಾಯಿನರಿ ಇವುಗಳಿಗೆ ಸಮಾನವಾದ ಜಂಘೆಗಳುಳ್ಳವರು ದರಿದ್ರರಾಗುವರು.

ಶ್ಲೋ ॥ ರೋಮೈಕೈಕಂಕೂಪಕೇಪಾರ್ಥಿವಾನಾಂ । ದ್ವೇದ್ವೇಜ್ಞೇಯೋಪಂಡಿತಶ್ರೋತ್ರಿಯಾಣಾಂತ್ರ್ಯಾದ್ಯೈ ರ್ನಿಸ್ವಾಮಾನವಾದುಃಖಭಾಜಃಕೇಶಾಶ್ಚೈವಂನಿಂದಿತಾಃಪೂಜಿತಾಶ್ಚ ॥ ೩॥

ತಾ॥ ಒಂದೊಂದುಗುಳಿಯಲ್ಲಿ ಒಂದೊಂದೇಕೂದಲು ಇದ್ದರೆ ಅಂಥವರು ಮಹಾರಾಜ ರಾಗಿರುವರು, ಪಂಡಿತರು ಶ್ರೋತ್ರಿಯರು ಇವರಿಗೆ ಒಂದೊಂದು ಕೂಪದಲ್ಲಿ ಎರಡೆರಡು ರೋಮಗಳಿರುವವು, ಕೇವಲ ದುಃಖವನ್ನನುಭವಿಸುವವರಿಗೆ ಒಂದೊಂದುಕೂಪದಲ್ಲಿ ಮೂರು ಮೊದಲ್ಗೊಂಡು ೩-೫-೬ ಕೂದಲುವರಿಗೆ ಇರುವವು, ಈಪ್ರಕಾರ ಕೇಶಗಳಿಂದ ಕಷ್ಟಸುಖಗಳುಂಟಾಗುವವು.

ಶ್ಲೋ ॥ ನಿರ್ಮಾಂಸಜಾನುಃಮ್ರಿಯತೆಪ್ರವಾಸೆಸೌಭಾಗ್ಯಮಲ್ಪೈರ್ವಿಕಟೈರ್ದರಿದ್ರಃ । ಸ್ತ್ರೀನಿರ್ಜಿತಾಶ್ಚಾಪಿಭವಂತಿನಿಮ್ನೈ ರಾಜ್ಯಂಸಮಾಂಸೈಶ್ಚಮಹದ್ಭಿರಾಯುಃ ॥ ೪॥

ತಾ॥ ಮಾಂಸವಿಲ್ಲದೆ ಮೊಣಕಾಲುಗಳು ಬತ್ತಿ ಹೋದವರು ಪರಸ್ಥಳ ಪ್ರಯಾಣದಲ್ಲಿ ಸಾಯುವರು, ಅವು ಮಿತವಾಗಿಯೂ ಸೊಗಸಾಗಿಯುಇದ್ದರೆ ಸೌಭಾಗ್ಯಲಕ್ಷಣವಿರ್ಪುದು, ಅದು ಬಹಳದೊಡ್ಡದಾಗಿಯೂ ವಕ್ರವಾಗಿಯೂ ಇದ್ದರೆ ದರಿದ್ರರಾಗಿಹರು, ಅವು ಕುಳಿಬಿದ್ದಿದ್ದರೆ ಹೆಂಗಸರಿಂದಸೋಲಿಸಲ್ಪಡುವರು, ಅದುಬಲಿತು ಮಾಂಸ ಪುಷ್ಟಿಯುಳ್ಳದ್ದಾಗಿದ್ದರೆ ಜಾರ್ಹಭೋಗವನ್ನೂ ಆಯುಷ್ಯವನ್ನೂ ಪಡೆಯುವರು.

ಶ್ಲೋ ॥ ದ್ವಿತ್ರೀಚತುರ್ಧಾಧಾರಾಭಿಃಪ್ರದಕ್ಷಿಣಾವರ್ತವಳಿತಮೂತ್ರಾಭಿಃ । ಪೃಥ್ವೀಪತಯೋಜ್ಞೇಯೊ ವಿಕೀರ್ಣಮೂತ್ರಾಶ್ಚಧನಹೀನಾ ॥ ೫॥

ತಾ॥ ಮೂತ್ರಿಸುವಾಗ ೨-೩-೪ ಧಾರೆಗಳಾಗಿಯೂ ಬಲಸುತ್ತಾಗಿ ಸುತ್ತಿಬರುವದಾಗಿಯೂ ಇದ್ದರೆ ಭೂಪಾಲಕರೆಂದು ಹೇಳಬೇಕು, ತುಂತುರುಗಳಾಗಿ ಎರಚಿದಂತೆ ಮೂತ್ರವಾದರೆ ಧನಹೀನನಾಗುವನು.

ಶ್ಲೋ ॥ ಏಕೈಕಮೂತ್ರಧಾರಾವಲಿತಾರೂಪ ಪ್ರಧಾನಸುತದಾತ್ರೀ । ಸ್ನಿಗ್ಧೋನ್ನತಸಮಮಣಯೋಧನವನಿತಾ ರತ್ನಭೋಕ್ತಾರಃ ॥ ೬॥

ತಾ॥ ಒಂದೇಧಾರೆಯಾಗಿ ಮೂತ್ರಬಂದರೆ ಅಂಥವರಿಗೆ ರೂಪವಂತನಾದ ಮಗನು ಹುಟ್ಟುವನು, ಜಡ್ಡಿನಿಂದಕೂಡಿದ ನುಣುವುಳ್ಳದ್ದಾಗಿಯೂ ಎತ್ತರವಾಗಿಯೂ ಸಮವಾಗಿಯೂ ಇರುವ ಗಂಟುಳ್ಳವರು ಧನಿಕರಾದಸ್ತ್ರೀಯ

ರನ್ನು ಅನುಭವಿಸುವರು.

ಶ್ಲೋ॥ ಸಿಂಹಕಟಿರ್ಮನುಜೇಂದ್ರಃ ಕಪಿಕರಭಕಟಿರ್ಧನೈಃಪರಿತ್ಯಕ್ತಃ । ಸಮಜಠರಾಭೋಗಯುತಾಘಟಪಿಠರನಿಭೋದರಾನಿಸ್ಸ್ವಾಃ ॥ ೭॥

ತಾ॥ ಸಿಂಹದನಡುವಿನಂತೆ ನಡುವಿದ್ದರೆ ಅರಸಾಗುವನು, ಕೋತಿಯ ನಡುವಿನಂತೆಯೂ ಕತ್ತೆಯನಡುವಿನಂತ ಇರುವ ನಡುವುಳ್ಳವನು ಹಣವಿಲ್ಲದವನಾಗುವನು, ಹೊಟ್ಟೆಯು ಸಮವಾಗಿದ್ದರೆ ಭೋಗವುಳ್ಳವನಾಗುವನು ಹರವಿನಂತೆ ಆನೆಯಂತೆಇರುವ ಹೊಟ್ಟೆಯುಳ್ಳವರುದರಿದ್ರರಾಗುವರು.

ಶ್ಲೋ॥ ಕಂಬುಗ್ರೀವೋರಾಜಾಪ್ರಲಂಬಕಂಠಃ ಪ್ರಭಕ್ಷಣೋಭವತಿ । ಪೃಷ್ಠಮಭಗ್ನಮರೋಮಶಮರ್ಧನವತಾಮ ಶುಭದಮತೋನ್ಯತ್ ॥ ೮॥

ತಾ॥ ಶಂಖದಹಾಗೆ ಕತ್ತು ಇದ್ದರೆ ರಾಜನಾಗುವನು, ಉದ್ದವಾಗಿಬೊಗ್ಗಿಸಿಕೊಂಡಿರುವಕತ್ತಾದರೆ ವಿಶೇಷವಾಗಿ ತಿಂಡಿತಿನ್ನುವನಾಗುವನು, ಪೃಷ್ಠವು ಭಗ್ನವಲ್ಲದೆಯೂ ಇದ್ದರೆ ಧನವಂತನಾಗುವನುಖಂಡಖಂಡಗಳಾಗಿ ಕೂದಲುಳ್ಳದ್ದಾಗಿದ್ದರೆ ಅಶುಭವನ್ನು ಮಾಡುವದು.

ಶ್ಲೋ॥ ಹಸ್ತಾಂಗುಳಯೋದೀರ್ಘಾಶ್ಚಿರಾಯುಷ್ಯಾಮವಳತಾಶ್ಚಶುಭಗಾನಾಂ । ಮೇಧಾವಿನಾಂಚಸೂಕ್ಷ್ಮಾಶ್ಚಿಪಿಟಾಃಪರಕರ್ಮನಿರತಾನಾಂ ॥ ೯॥

ತಾ॥ ಕೈಬೆರಳುಗಳು ಉದ್ದವಾಗಿದ್ದರೆ ಬಹುಕಾಲ ಬದುಕುವನು, ಸೌಭಾಗ್ಯವಂತರಿಗೆ ಮಡತೆಗಳಿಲ್ಲದೆ ಇರುವವು ಮೇಧಾವಿಗಳಿಗೆ ಸೂಕ್ಷ್ಮವಾಗಿರುವವು ಪರಕರ್ಮದಲ್ಲಿ ನಿರತರಾದವರಿಗೆ ಅವಲಕ್ಕಿಯಹಾಗೆ ಹೊಟ್ಟೆದಿರುವವು.

ಇತಿ ವರಾಹಮಿಹಿರ ಸಾಮುದ್ರಿಕಸಂಗ್ರಹಃ.



## ಗ ರ್ಗ ಸಾ ಮು ದ್ರಿ ಕ ವು.



ಶ್ಲೋ॥ ಅಥಾತಸ್ಸಂಪ್ರವಕ್ಷ್ಯಾಮಿ ಗರ್ಗಸಾಮುದ್ರಸಂಗ್ರಹ। ಸ್ತ್ರೀಣಾಂಚಪುರುಷಾಣಾಂಚ ಫಲಸಾಮ್ಯಾಯಕಲ್ಪತೇ ॥ ೧॥

ತಾ॥ ಇನ್ನು ಗರ್ಗಮುನಿಸಾಮುದ್ರಿಕವನ್ನು ಹೇಳುತ್ತೇನೆ ಅದರಫಲವು ಸ್ತ್ರೀಯರಿಗೂ ಪುರುಷರಿಗೂ ಸಮವಾಗಿರುವದು.

ಶ್ಲೋ ॥ ಅಂಗುಷ್ಠಮೂಲಗಾರೇಖಾಹಿಸಂತಾನಂ ಸೂಚಯಂದಿತಾಃ ಸಾಂಕುರಾಶ್ಚತಥಾನಾರ್ಯಃ ಪುರುಷಾಸ್ಯಜಟಾಸ್ಮೃತಾಃ ॥ ೨ ॥ ದೀರ್ಘಾದೀರ್ಘಾಯುಷೋಜ್ಞೇಯಾ ಅಲ್ಪಾಅಲ್ಪಾಯುಷಸ್ಮೃತಾಃ । ಪರ್ವಭಿಃಸಾಪ್ನೋತಿಸೂಕ್ಷ್ಮತ್ವೇ ವಿಚ್ಛೇದೋಬಾಲಘೋತತಃ ॥ ೩ ॥ ತದಭಾವೇಪ್ರಜಾ

ಭಾವ ಇತಿ ಸಂತಾನಲಕ್ಷಣಂ । ದಂಪತ್ಯೋನ್ನ ತರಾಲಾಭೇ ತದಭ ವೊನ್ಯಥಾ ನಥ್ಯಾ ॥ ೪।

ತಾ॥ ಹೆಬ್ಬೆರಳಿನ ಬುಡದಮೇಲೆ ಇರುವರೇಖೆಗಳು ಸಂತಾನವನ್ನುಸೂಚಿರುತ್ತವೆ ಅವುವೊಳಕೆಗೊಂಡು ಕವಲುತೋರುವವು ಹೆಂಣಾಗಿಯೂ ಜಡೆಹಣೆತಂದೆ ತೋರುವವು ಗಂಡಾಗಿಯೂ ಇರುತ್ತವೆ, ಅತಿಸೂಕ್ಷ್ಮಗಳಾ ಗಿದ್ದರ ಬಸುರ ಇಳಿದುಹೋಗುತ್ತೆ ವಿಚ್ಛಿನಗಳಾದರೆ ಬಾಲಮರಣವು ಮಾಟಕಾಪಿದ್ದರೆ ಅಲ್ಪಾಯುಷ್ಯದ ಸಂತಾನ, ನೀಳವಾಗಿಯೂ ದೃಢವಾಗಿಯೂ ಸ್ಪಷ್ಟವಾಗಿಯೂ ಇದ್ದರೆ ಆಯುಷ್ಮ ತ್ಸಂತಾನವೆಂದು ತಿಳಿಯ ತಕ್ಕದ್ದು, ಗಂಡಹೆಂಡಿರಲ್ಲಿ ಯಾರೊಬ್ಬರಿಗೆ ಸಂತಾನ ರೇಖೆಯಿಲ್ಲವೋ ,ಅವರಿಂದ ಸಂತಾನವಿಲ್ಲ ಅಂದರೆ ಸ್ತ್ರೀ ಯರಿಗೆ ಪುರುಷಾಂತರ ದಿಂದಲೂ ಪುರುಷರಿಗೆ ಅನ್ಯಸ್ತ್ರೀಯರಲ್ಲಿಯೂ ಸಂತಾನವಾಗುತ್ತೆ, ಇಬ್ಬರಿಗೂ ರೇಖೆಗಳಿದ್ದರೆ ಅವುಸತ್ಸಂತಾನವಾಗುತ್ತೆ ದಂಪತಿಗಳಿಬ್ಬರಿಗೂ ರೇಖೆಗಳಿತದಿದ್ದರೆ ಸಂತಾನವೇ ಆಗುವದಿಲ್ಲ ಎಷ್ಟುರೇಖೆಗಳಿದ್ದರೆ ಅಷ್ಟುಸಂತಾನಗ ಳಾಗು ತ್ತವೆ ಮುಂಡೆಯರಗೆ ರೇಖೆಗಳು ಹುಟ್ಟಿದರೆ ಗೋಳಕಸಂತಾನವಾಗುವದು.

ಶ್ಲೋ॥ ಕನಿಷ್ಠಾಂಗುಳಿ ಮೂಲೇತು ರೇಖಾಃ ಕರತಲಾಂತಗಾಃ । ಸಹೊದರಂ ಸೂಚಯಂತಿ ಪುತ್ರವತ್ತತ್ರನಿರ್ಣಯಃ ॥ ೫॥

ತಾ॥ ಕಿರುಬೆರಳಿನ ಕೆಳಗೆ ಅಂಗೈ ಕೊನೆಯಲ್ಲಿಇರುವ ರೇಖೆಗಳು ಅಣ್ಣತಮ್ಮ ಅಕ್ಕತಂಗಿಯರೆಂಬ ಸಹೋದರ ಭಾವವನ್ನು ಸೂಚಿಸುತ್ತವೆ ಸಂತಾನಕ್ಕೆ ಹೇಳಿದಂತೆಯೇ ಅದರ ರೇಖಾನಿರ್ಣಯ ವೆಂದರಿವುದು.

ಶ್ಲೋ॥ ಮಧ್ಯೇತು ಧನರೇಖಾಯಾ ದಕ್ಷಿಣೋತ್ತರ ಪಾರ್ಶ್ವಕೇ । ಮಾತರಂ ಪಿತರಂವಿದ್ಯಾ ದ್ವರ್ಗರೇಖಾಸ್ಸ ಮಾಪಗಾಃ ॥ ೬ ॥ ಸಂಸಕ್ತಾಆತ್ಮರೇಖಾಯಾ ಮಾತ್ಮಬಾಂಧವ ಸೂಚಕಾಃ । ಸೂಕ್ಷ್ಮತ್ವೇ ಪಿಚರೇಖಾನಾಂ ಫಲಂಸಂತಾನವನ್ಮತಂ ॥ ೭॥

ತಾ॥ ಅಂಗೈನಡುವೆ ಧನರೇಖೆಗೆ ಬಲದಲ್ಲಿ ತಾಯಿತದ್ವರ್ಗ ಅಂದರೆ,ಮಾತಾಮಹ ಮಾತುಳ ಮಾತೃಭಗಿನ್ಯಾದಿಗಳು ಉತ್ತರದಲ್ಲಿ ತಂದೆಯೂಜ್ಞಾತಿಗಳೂ, ಮಾತೃರೆಖೆಯಕೆಳಗೆ ಆತ್ಮರೇಖೆಯನ್ನು ಸೋಂಕಿರುವುದುಆತ್ಮಬಂಧುರೇಖೆಗಳು ಇವೆಲ್ಲಸೂಕ್ಷ್ಮವಾಗಿದ್ದರೂ ಇದರಆಕಾರ ಫಲವನ್ನು ಸಂತಾನರೇಖೆಗೆಹೇಳಿ ಇರುವಂತೆ ಯೇತಿಳಿದು ಬಳಗವನ್ನು ನಿರ್ಧರಿಸಬೇಕು

ಶ್ಲೋ॥ ಅಂಡಾಂಘ್ರಿಕುಕ್ಷಿ ವಕ್ಷೋದೋ ಶ್ಶಿರಾಂಸ್ಯು ಷ್ಠಾದಿದಕ್ಷಿಣೇ, ಕ್ರಮಾದ್ಯಾಮೇತುಕೌರ್ಪ್ಯಾದಿ ವ್ಯುತ್ಕ್ರಮಾದಂಗರಾಶಯಃ ॥ ೮॥

ತಾ॥ ಬಲಗಡೆ ಅಂಡದಲ್ಲಿ ವೃಷಭ, ಕಾಲು, ಮಿಥುನ, ಹೊಟ್ಟೆ, ಕ

ರ್ಕ್ನಾಟಕ ಎದೆ ಸಿಂಹ, ತೋಳ ಕನ್ಯೆ, ತಲೆ ತುಲೆ, ಇನ್ನು ಎಡಗಡೆಯಲ್ಲಿ ಅಂಡವೃಶ್ಚಿಕ, ಕಾಲು, ಧನಸ್ಸು, ಹೊಟ್ಟೆ, ಮಕರ, ಎದೆ, ಕುಂಭ, ತೋಳು ಮೀನ, ತಲೆ, ಮೇಷ. ಹೀಗೆ ಅಂಗರಾಶಿಗಳನ್ನು ತಿಳಿಯಕ್ಕದ್ದು.

ಶ್ಲೋ॥ ಪದಾದಿಕಟಿಪರ್ಯಂತಂ ತತಃಕಂಠಾಂತಮೇವಚ । ತತಃಕೇಶಾಂದಮೃಕ್ಷಾಂ ವಿಜ್ಞೇಯಂನವಕತ್ರಯಂ ॥ ೯॥

ತಾ॥ ಕಾಲಿನಿಂದ ನಾಭಿವರಿವಿಗೂ ಒಂಭತ್ತು ಅಲ್ಲಿಂದ ಕೊರಳತನಕ ಒಂಭತ್ತು ಅಲ್ಲಿಂದತಲೆ ಕೂದಲಕೊನೆತನಕ ಒಂಬತ್ತು ಅಂತೂ ೨೭ ನಕ್ಷತ್ರಗಳನ್ನು ಭಾವಿಸಬೇಕು.

ಶ್ಲೋ॥ ವರ್ತುಲಂಚತುರಶ್ರಂಚ ತ್ರಿಕೋಣಂ ಬಾಣಮೇವಚ । ದೀರ್ಘಂಯಚತುರಶ್ರಾಖ್ಯಂ ಪಂಚಕೋಣಂಧನುಸ್ತಥಾ ॥ ೧೦ ॥ ಧ್ವಜಶ್ಚೇತಿಗ್ರಹಾಕಾರಂ ಸ್ಮಿನ್ನಂಗೇಷುಪ್ರದೃಶ್ಯತೇ । ತದ್ರಾಶೌತದ್ಗ್ರಹೇಜನ್ಮ ತದ್ದಶಾಯಾಂತುತದ್ಭವೇತ್ ॥ ೧೧ ॥ ಗ್ರಹನಕ್ಷತ್ರವಿಜ್ಞಾನಾತ್ ಸರ್ವಂಜ್ಯೋತಿಷಿಕಂವದೇತ್ । ಆಯುರ್ಧನವಿವಾಹಾದಿ ರೇಖಾಭಿಃ ಫಲಯೋಜನಂ ॥ ೧೨ ॥

ತಾ॥ ಸೂರ್ಯಾದಿ ಗ್ರಹಗಳ ಮಂಡಲಾಕಾರ ರೇಖೆಗಳು ಯಾವ ಅಂಗದಲ್ಲಿಇದ್ದರೆ ಅದೇಗ್ರಹವು ತದಂಗರಾಶಿಯಲ್ಲಿ ಇದ್ದಾಗ ಹುಟ್ಟಿದವನಾಗಿ ರುತ್ತಾನೆ, ಯಾವ ಅಂಗದಲ್ಲಿ ಯಾವ ಮಂಡಲರೇಖೆ ಕಾಣಿಸಿದರೆ ಆಗ ಆದಶೆ ನಡೆಯುತ್ತಿರುವದು. ಗ್ರಹನಕ್ಷತ್ರ ಜ್ಞಾನದಿಂದಿದ್ದ ಜ್ಯೋತಿಶ್ಯಾಸ್ತ್ರ ಪ್ರಕಾರ ಸಕಲ ಫಲಗಳನ್ನೂ ಹೇಳಬಹುದು, ಆಯುರ್ಧನ ವಿವಾಹಾದಿ ರೇಖಾಫಲಗಳನ್ನು ಅದರೊಂದಿಗೆ ಸೇರಿಸಿಕೊಬೇಕು.

ಶ್ಲೋ॥ ಅಂಗಾಗುಳಂಶಿರೋ ವಿಘ್ನಂ ತಷ್ಟಂದ್ವಾದಶಬಿಸ್ತಥಾ । ಲಗ್ನಂವಿಜಾಯತೇತೇನ ಸರ್ವಂಫಲಮುದೀರಯೇತ್॥ ೧೩॥

ತಾ॥ ದೇಹದ ಉದ್ದದ ಅಂಗುಳ ಸಂಖ್ಯೆಯನ್ನು ತಲೆಯ ಸುತ್ತಳತಯ ಅಂಗುಳ ಸಂಖ್ಯೆಯಿಂದ ಗುಣಿಸಿ ೧೨ ರಿಂದ ಭಾಗಿಸಿದ ಶೇಷವೇಮೇಷಾದಿಯಾಗಿ ಲಗ್ನನಿರ್ಣಯವಾಗುತ್ತೆ ಅದರಿಂದ ಸಕಲ ಫಲಗಳನ್ನೂ ಹೇಳಬೇಕು.

ಇತಿ ಗರ್ಗಸಾಮುದ್ರಿಕ ಸಂಗ್ರಹ.

ಸಂಪೂರ್ಣ ಮಾದುದು.



